विश्वमध्वमहापरिषत् ग्रन्थमाला - २९

श्रीमदानन्दतीर्थभगवत्पादाचार्यविरचितः

# श्रीमन्महाभारततात्पर्यनिर्णयः

दशटीकासमुल्लसितः



सम्पादकौ

पं. श्रीनिवासतीर्थाचार्यः

पं. पुराणिक् जयतीर्थाचार्यः

सत्यध्यानविद्यापीठम्, मुम्बई.

प्रकाशनम्

विश्वमध्वमहापरिषत्

उत्तरादिमठः, जयतीर्थविद्यापीठम्, बेङ्गळूरु.

श्रीमदानन्दतीर्थभगवत्पादाचार्यविरचितः

# श्रीमन्महाभारततात्पर्यनिर्णयः

श्रीव्यासतीर्थविरचिता भारतभावपञ्चिका( भावटीका), श्रीवादिराजतीर्थविरचिता भावप्रकाशिका
श्रीसत्याभिनवतीर्थविरचिता दुर्घटार्थप्रकाशिका, श्रीसङ्कर्षणतीर्थविरचिता शुभप्रकाशिका,
वरदराजाचार्यविरचिता मन्दसुबोधिनी, जनार्दनभट्टविरचिता पदार्थप्रकाशिका,
ताम्रपर्णीश्रीनिवासाचार्यविरचिता प्रमेयमणिमाला, जम्बुखण्डी लक्ष्मीनरसिंहाचार्यविरचितटीकासंग्रहः
रामाचार्यविरचिता भावविवृतिः, भारतश्रीनिवासाचार्यविरचिता तात्पर्यनिर्णयटिप्पणी

**इति दशटीकाभिः समुल्लसितः**

**प्रथमो भागः**

**प्रथमद्वितीयतृतीयाध्यायात्मकः**


सम्पादकौ

**पं. श्रीनिवासतीर्थाचार्यः**

**पं. पुराणिक जयतीर्थाचार्यः**



प्रकाशनम्

**विश्वमध्वमहापरिषत्**

उत्तरादिमठः, बेङ्गळूरु.

**Sriman Mahabharatatatparyanirnaya—with 10 commentaries**
critically edited by Pt. Srinivasatirthacharya & Pt. Jayatirthacharya Puranik, published by Vishwa Madhwa Mahaparishat, Jayateertha Vidyapeetha, Shankarpuram, Basavanagudi, Bangalore - 560 004.

Published by :
**Vishwa Madhwa Mahaparishat**
Jayateertha Vidyapeetha
Shankarpuram, Basavanagudi
Bangalore - 560004.

| | |
|---|---|
| First Edition | : 2005 |
| Pages | : 498+xxxviii |
| Copies | : 1000 |
| Price | : Rs. 320.00 |

| | |
|---|---|
| Typeset | : Students of Satyadhyana Vidyapeetha |
| Page Layout & Cover Design | : Prahlad Deshpande |
| Printers | : Rashmi Printers, Bangalore. |

।। श्रीदिग्विजयरामो विजयते ।।

# अनुग्रहसन्देशः

भगवान् अनन्तगुणपूर्णः दोषविदूरः सकलजगज्जन्मादिकारणं श्रीमान्नारायणः नष्टधर्मज्ञान-लोककृपालुभिः ब्रह्मरुद्रेन्द्रादिभिरर्थितो परापरतत्त्वप्रदर्शनाय सत्यवतीपराशरौ निमित्तीकृत्य भूमाववतीर्य इष्टानिष्टप्राप्तिपरिहारादर्शनात् वेदार्थाज्ञानाच्च संसारे क्लिष्यमानानां वेदानधिकारिणां स्त्रीशूद्रादीनाञ्च धर्मज्ञानद्वारा मोक्षो भवेदिति कृपालुः सर्ववेदार्थोपबृंहितां अत एव वेदाधिकारिणामपि त्रैवर्णिकानां पुसां वेदार्थज्ञानोपायभूताम्, इन्द्रियाद्यनपेक्षभगवज्ज्ञानविषयीकृतवेदानुक्तार्थप्रतिपादिकां तत एव वेदोत्तमां सर्वप्राणिविज्ञेयार्थप्रतिपादिकां अत्यन्तगूढार्थकत्वात् बृहस्पत्यादिसर्वप्राण्य-विज्ञेयसर्वप्राणिनायकब्रह्मादिविज्ञेयार्थनिरूपिकां अत एव ब्रह्माद्यधिकारिकां मुख्यतो विष्णुबोधिकां सर्वत्र दशावरार्थां ब्रह्मादिभिः तुलायां निक्षिप्य निर्णेयसर्वशास्त्रोत्तमत्वेन निर्णीतां सर्वपापक्षय-साधनज्ञानविषयनिरुक्तिमच्छब्दवाच्यां स्वस्मात् पुण्डरीकाक्षादन्येन कर्तुमशक्यां ऋषिभिः नारदादिभिश्चाधीयमानां महाभारतसंहितां अचीक्लृपत् । स एव भगवान् पाराशर्यः नारायणः परतत्त्वज्ञापनाय भारतस्य परमं तात्पर्यार्थं स्फुटं वक्तुं जगदेकभर्तुः स्वस्यैव शिष्यं स्वप्रसादादेव योऽखिलान् सरहस्यसङ्ग्रहान् सपञ्चरात्रान् वेदान् पुराणयुक्तानितिहासान् अन्याअपि सर्वविद्या यथावद्वेद तं सुपूर्णप्रज्ञाभिधं आनन्दतीर्थमुनिं नियुयोज । सेयमुदीर्णविद्या पवनस्य तृतीयातनुः भगवदाज्ञप्ता सती सद्भारतार्थप्रतिपादनाय भारतार्थप्रकाशमिमं 'श्रीमन्महाभारततात्पर्यनिर्णया'भिधं ग्रन्थं चकार । वेदेतिहासादिविनिर्णयोक्ताः कथाः भक्तानुजिघृक्षया अत्र कथयाम्बभूव । धर्मार्थकाम-मोक्षरूपपुरुषार्थचतुष्टयहेतुः नारायणपरमप्रीतिप्रापकोऽयं ग्रन्थवरः मन्दाधिकारिभि-रनवगाह्यार्थयुक्त इति मनीषया हरिपादभक्ताः व्यासतीर्थवादिराजवरदराजजनार्दनभट्टप्रभृतयः बहुतरप्रमेयप्रकाशकव्याख्याननिर्माणव्याजेन मध्वचित्ताद्रिलोडितात् इतिहासपुराणाब्धेर्जातां भारततात्पर्यसुधां सिषेविरे तत्रैव रेमिरे च ।

परमिदानीं न सर्वेषां तानि सर्वाणि व्याख्यानरत्नानि मुद्रितानि समुपलभ्यन्ते इति मत्वा मुद्रणार्थं प्रवृत्ता वयम् । अस्मद्गुरुचरणैः श्री १००८ श्रीसत्यप्रमोदश्रीचरणैः महता परिश्रमेण महत्या श्रद्धया च तत्र तत्र स्थितेषु विद्वद्वंशजेषु तत्तद्व्याख्याकृच्छिष्यपरम्परागतेषु जनेषु वर्तमानानि व्याख्यानपुस्तकानि सङ्गृहीतानि । अन्यथा तानि लुप्तान्यभविष्यन् । तादृशसकलव्याख्यानाध्येतृभिः सर्वैः सज्जनैः अस्मद्गुरुचरणानां महोपकारः सर्वदा स्मरणीयः। महोपारकृद्भ्यो स्वरूपोद्धारकेभ्यो तपोनिधिभ्यो ज्ञानधनेभ्योऽस्मद्गुरुचरणेभ्यः साष्टाङ्गान् प्रणामान् विदध्महे ।

एतत्पुस्तकस्य सम्पादनं स्वयं कृत्वा स्वशिष्यैरपि कारयित्वा महतीं व्यासमध्वसेवां कृतवद्भ्यः अस्मद्विद्यागुरुभ्यः श्रीपण्डितराज विद्यासिंहाचार्येभ्यः भगवान् व्यासरामः ज्ञानादिदानेन समनुगृण्हातु इति प्रार्थयामहे ।

व्याख्यानपुस्तकेषु कानिचनपुस्तकानि पं. प्रभञ्जनाचार्यैः व्यासानकेरे उपाह्वैः दत्तानि । तैरपि बहूनि अमुद्रितानि व्याख्यानरत्नानि तत्रतत्र स्थितानि भूयसा परिश्रमेण सङ्गृहीतानि इति माध्वानां सन्तोषप्रदोऽयं विषयः। प्रो।। कृ.त. पाण्डुरङ्गीमहोदयाः, पं. नागसम्पिगे आनन्दतीर्थाचार्याः, पं. पगडाल राममूर्त्याचार्याः, पं. गलगलि प्राणनाथाचार्याः तथा पं. मळगि जयतीर्थाचार्याः अपि ग्रन्थस्यास्य प्रकाशने व्याख्यानानां मूलकोशप्रदानेन साहाय्यं व्यतानिषुः। अस्मद्गुरुवरसङ्गृहीतपुस्तकसंरक्षणे सपरिवाराणां श्रीकराचार्याणां उमर्जीत्युपाह्वानां विशिष्टा सेवा समस्ति। एतान् सर्वान् भगवान् अस्मदुपास्यः श्रीमूलरामदिग्विजयरामवेदव्यासाभिन्नः बिम्बरूपी समनुगृह्णातु।

ग्रन्थस्यास्य शोधने अक्षरयोजनायां सम्पादने च कृतभूरिपरिश्रमाः चत्वारः पण्डिताः सत्याध्यान विद्यापीठे अधीतवन्तः सन्ति । तेच पं. रामकृष्णाचार्यः रोट्टि, पं. राघवेन्द्राचार्य जयमङ्गलम्, पं. जयतीर्थाचार्यः पुराणिकः, पं. श्रीनिवासतीर्थाचार्यः। सर्वैरप्येतैः महत्या श्रद्धया महता आयासेन शोधनादि कृतम् । तत्रापि श्रीनिवासतीर्थाचार्येण तथा जयतीर्थाचार्येण च सुधामङ्गलानन्तरमपि लौकिकव्यामोहं त्यक्त्वा केवलं तात्पर्यनिर्णयपुस्तकसम्पादनकार्यार्थमेव मुम्बापुर्यामुषित्वा अहोरात्रं कदाचिद्भोजनं अकृत्वा कदाचिदेकभुक्तं कृत्वा श्रीमद्वेदव्यासपवमानसेवेयमकारि । बहूनि पुराणादिस्थितानि तात्पर्यनिर्णयसंवादीनि प्रमाणवाक्यानि स्वयं संशोधितानि एताभ्यां विद्वद्भ्याम् । किञ्च एताभ्यां विद्वद्भ्यां तथा पं. विद्याधीशाचार्य गुत्तल्, पं. एल् एस् वादिराजाचार्यः, पं. करणं वादिराजाचार्यः इत्येतैः पञ्चभिः युवाभिः पण्डितैः आसेतुहिमाचलं सञ्चारं विधाय तत्र तत्र पुस्तकालयेषु स्थित पुस्तकानि दृष्ट्वा मध्वाचार्यनिन्दापराध्यायाः सौरपुराणे न सन्ति किन्तु ते प्रक्षिप्ता इति सप्रमाणं समार्थ्यत इति प्रसङ्गेऽस्मिन् स्मृत्वा मोमुदीति मनोऽस्माकम् । श्रीमान् व्यासतीर्थः पत्रसंयोजनादीन् सुष्ठु व्यतनोत् । अत एतान् सर्वान् भगवान् अस्मदुपास्यः श्रीमूलरामदिग्विजयरामवेदव्यासाभिन्नः बिम्बरूपी प्रसन्नो भूत्वा अतिशयेन ज्ञानभक्तिवैराग्यदानेन सततपाठप्रवचनहरिचरणध्याननिष्कामकर्मासक्तिदानेन च समनुगृण्हातु इति सम्प्रार्थयामहे ।

इत्यनेकनारायणस्मरणानि

श्रीमत्सत्यात्मतीर्थश्रीपादाः

श्रीसत्यात्मतीर्थश्रीपादाः

उत्तरादिमठः, कल्याणनगरम्

# समर्पणम्

अस्मद्गुर्वन्तर्गतपरमगुर्वन्तर्गत सत्यात्मतीर्थसत्यप्रमोदतीर्थ-

सत्यध्यानतीर्थादिसमस्तगुर्वन्तर्गत तत्त्वाभिमानिदेवतान्तर्गत

भारतीरमणमुख्यप्राणान्तर्गत पूर्वोत्तरवर्णसन्धि-

सन्धानप्रतिपाद्यवराहवामननरसिंहाभिन्नः

अम्भृणीपतिः वेदव्यासः

**प्रीयताम्**

### ಈ ಗ್ರಂಥಕ್ಕಾಗಿ ಧನಸಹಾಯ ಮಾಡಿದ ಉದಾರಹೃದಯದ

1. ಶ್ರೀಯುತ ವಸಂತ ಮಹಿಷೀ, ಧಾರವಾಡ. ರೂ. 50,000
2. ಶ್ರೀಯುತ ರಾಜನ್, ಮುಂಬಯಿ. ರೂ. 50,000
3. ಶ್ರೀಯುತ ವೇದಾಜೀ ರಾವ್, ಚೆನ್ನೈ. ರೂ. 40,000
4. ಶ್ರೀಯುತ ರಾಘವೇಂದ್ರ ಹರಳಪ್ಪನವರ್ ರೂ. 10,000
5. ಶ್ರೀಯುತ ಆರ್.ಎ. ದಿವಾನ್‌ಜೀ, ಮುಂಬಯಿ. ರೂ. 5,000

*ಇವರಿಗೆ ನಮ್ಮ ಉಪಾಸ್ಯ ಮೂರ್ತಿಗಳಾದ ಶ್ರೀ ಮೂಲರಾಮ ದಿಗ್ವಿಜಯರಾಮ ವೇದವ್ಯಾಸದೇವರು ಜ್ಞಾನಭಕ್ತಿವೈರಾಗ್ಯಾದಿಗಳನ್ನು ಕೊಟ್ಟು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.*

# विषयानुक्रमणिका

॥ ಶ್ರೀಗುರುಭ್ಯೋ ನಮಃ ॥

# ಮುನ್ನುಡಿ

ನ ಕರ್ಹಿಚಿತ್ ಮತ್ಪರಾಃ ಶಾಂತರೂಪಾಃ
ನಂಕ್ಷ್ಯಂತಿ ಮೇ ನೋನಿಮಿಷೋ ಲೇಢಿ ಹೇತಿಃ ।
ಯೇಷಾಮಹಂ ಪ್ರಿಯ ಆತ್ಮಾ ಸುತಶ್ಚ
ಸಖಾ ಗುರುಃ ಸುಹೃದೋ ದೈವಮಿಷ್ಟಮ್ ॥

ಅನಾದಿ ಕಾಲದಿಂದಲೂ ಬಾನಗಲವಾಗಿ ಬೆಳೆದು ನಿಂತಿದೆ ನಮ್ಮ ವೈದಿಕ ಸಂಸ್ಕೃತಿ. ಇದು ದಿವ್ಯ ಭವ್ಯ ಸಂಸ್ಕೃತಿ . ಧರ್ಮ, ಅರ್ಥ, ಕಾಮ, ಮೋಕ್ಷಗಳಿಗೆ ಕಾರಣವಾದ ಸಂಸ್ಕೃತಿ. ಸಾವಿರಾರು ವರ್ಷಗಳಿಂದ ಪರಧರ್ಮಗಳಿಂದ ಆಘಾತವಾದರೂ ನಶಿಸದೆ ಉಳಿದಿದೆ. ಅಷ್ಟೇ ಅಲ್ಲದೆ ತನ್ನ ದಿವ್ಯ ಪರಂಪರೆಯಿಂದ ಸರ್ವಜನೀನವಾಗಿದೆ. ಅಂಥ ಸಂಸ್ಕೃತಿಗೆ ಕಾರಣವಾದದ್ದು ವೇದಗಳು. ಈ ಆಗಮಗಳಿಗೆ ಊರ್ಧ್ವನಾದ ಪರಮಾತ್ಮನೇ ಮೂಲ. ಅಂತೆಯೇ ಇದು ಊರ್ಧ್ವ ಮೂಲ. ಧರ್ಮದ ಹೂವಿನ, ಅರ್ಥದ ಎಲೆಯ, ಕಾಮದ ಚಿಗುರಿನ, ಮೋಕ್ಷ ಮಹಾಫಲದ ಅಕ್ಷಯ ಅದ್ಭುತ ಕಲ್ಪವೃಕ್ಷ ಈ ನಿಗಮವೃಕ್ಷ. ಮಹಾಭಾರತ, ಭಾಗವತ, ಸಾತ್ವಿಕಪುರಾಣ ಮುಂತಾದವುಗಳು ಈ ವೃಕ್ಷದ ರಸತುಂಬಿದ ಹಣ್ಣುಗಳೇ. ಭಕ್ತರ ಉದ್ಧಾರಕ್ಕಾಗಿ ಭಗವಾನ್ ವೇದವ್ಯಾಸದೇವರು ಇವುಗಳನ್ನು ಉದುರಿಸಿದರು. ಶುಕಾದಿಮುನಿಗಳು ಹಣ್ಣಿನ ರಸವನ್ನು ತಾವು ಪಾನಮಾಡಿದ್ದಲ್ಲದೆ ಜಗತ್ತಿಗೂ ಹಂಚಿದರು.

## ಮಹಾಭಾರತ

ವೇದಗಳಿಗೂ ಎಟುಕದ ನಿಲುಕದ ಕೇವಲ ಈಶ್ವರನ ಅನಂತವಿಚಾರ ಲಹರಿಗಳ ಬಿಂದು ಮಹಾಭಾರತ . ವೇದವ್ಯಾಸರು ಅನಂತ ಅರಿವಿನ ಆಗರ. ಆ ಅನಂತ ಅರಿವಿನ ಆಗರದ ಒಂದು ಅಣುವೇ ಮಹಾಭಾರತ. ಬೃಹಸ್ಪತಿಯ ಬುದ್ಧಿಗೂ ಪೂರ್ಣವಾಗಿ ಗೋಚರಿಸದ ಬ್ರಹ್ಮಣಸ್ಪತಿಯ ಬುದ್ಧಿಯ ಓರೆಗಲ್ಲು ಈ ಭಾರತ . ವೇದಕ್ಕೆ ಪ್ರತಿ ಋಕ್ಕಿಗೆ ಮೂರು ಅರ್ಥ, ಮಹಾಭಾರತದ ಪ್ರತಿ ಶ್ಲೋಕಕ್ಕೆ ಹತ್ತು ಅರ್ಥ, ಇದೇ ಮಹಾಭಾರತದ ವಿಷ್ಣುಸಹಸ್ರನಾಮಕ್ಕೆ ನೂರು ನೂರು ಅರ್ಥ. ಹೀಗೆ ಬಹು ಅರ್ಥಗಳಿಂದ ತುಂಬಿದ, ಶೇಷಾದಿದೇವತೆಗಳಿಗೂ ಸಂಪೂರ್ಣವಾಗಿ ತಿಳಿಯಲು ಆಗದ ಅಗಮ್ಯಗ್ರಂಥ ಮಹಾಭಾರತ. ಎಲ್ಲರಿಗೂ ತಿಳಿದರೂ ತಿಳಿಯದೇ ಇದ್ದ ಬಹುಪಾಲು ಇರುವುದು. ಬಹು ಪರೋಕ್ಷಾರ್ಥಗಳಿಂದ ಕೂಡಿದ್ದು, ದೇವ ಮಾನವರಿಗೆ ನಿಲುಕದ ದಿವ್ಯವಾದ ತತ್ವನಿಧಿಗಳ ಆಕರ ಮಹಾಭಾರತ. ಆದ್ದರಿಂದಲೇ ದೇವಾದಿದೇವತೆಗಳೂ ಇದನ್ನು ವೇದವ್ಯಾಸರ ಬಳಿ ಹಣೆಮಣಿದು ಓದಿದರು . ತೂಗಿ ನೋಡಿ ಈಶ್ವರನ ಬುದ್ಧಿಯ ಮಹತ್ತಿನ, ಸಕಲ ಶಾಸ್ತ್ರಗಳನ್ನು ಮೀರಿದ ಅರ್ಥಭಾರದ ಮಹಾಭಾರತವೆಂದರು . ಸಕಲ ಶಾಸ್ತ್ರಗಳನ್ನು ಮೀರಿ ನಿಂತಿರುವದರಿಂದ ಜಯ ಎಂದು ಕರೆದರು .ಅದರ ನಿರ್ವಚನದ ಜ್ಞಾನ ಪಾಪಪ್ರಕ್ಷಾಲನ ಕಾರಣ ಎಂದರು . ಅದೇ ನುಡಿ ಇದು -

ಮಹತ್ತ್ವಾತ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ।
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥

ಪರಾಪರತತ್ವಗಳ ಜ್ಞಾನವೇ ಸಂಸಾರ ಮೋಚಕ. ಇದು ಇಲ್ಲದಕ್ಕಾಗಿ ಸಜ್ಜನರು ಸಂಸಾರದಲ್ಲಿ ಬಹಳ ದು:ಖಿಗೊಂಡಿದ್ದರು. ಈ ದಿವ್ಯ ತತ್ವಕ್ಕಾಗಿ ದೇವತೆಗಳು ದೇವರನ್ನು ಪ್ರಾರ್ಥಿಸಿದರು . ಅದರ ಉಪದೇಶಕ್ಕಾಗಿ ವೇದವ್ಯಾಸದೇವರ ಅವತಾರ. ಇದು ಅವರಿಂದ ಅಲ್ಲದೇ ಅನ್ಯರಿಂದ ಸಾಧ್ಯವಿಲ್ಲ. ಅವರ ಉದ್ದೇಶ ಪೂರ್ಣವಾಗಿದ್ದು ಮಹಾಭಾರತ ಬರೆಯುವದರಿಂದಲೇ. ಇಂಥ ಕೃತಿ ಮಹಾಭಾರತ.

ವೇದವ್ಯಾಸರ ದೃಷ್ಟಿಯಲ್ಲಿ ಇದು ಕಾವ್ಯವೂ ಹೌದು . ಕವಿ ಎಂದರೆ ಜ್ಞಾನಿ ಎಂದರ್ಥ. ಜ್ಞಾನಿ ಎಂದರೆ ವಾಲ್ಮೀಕಿಯಂತೆ ಜ್ಞಾನಿಯಲ್ಲ ಬರೀ ಒಬ್ಬ ಋಷಿಯಲ್ಲ. ಜ್ಞಾನಿ ಯಾರು ಎಂದರೆ -ಕವಿರ್ಮನೀಷೀ - ಎಂದು ಕರೆಸಿಕೊಂಡವರು. ನಿತ್ಯಜ್ಞಾನದ ಮೂರ್ತಿ ಎಂದರ್ಥ. ಎಣೆಯಿಲ್ಲದ ಕೊನೆಯಿಲ್ಲದ ತನ್ನ ಮತ್ತು ಎಲ್ಲರ ಎಲ್ಲ ಬಗೆಗಿನ ಜ್ಞಾನದ ಮೂರ್ತಿ ವೇದವ್ಯಾಸದೇವರು. ಅವರೇ ನಿಜವಾದ ಕವಿಗಳು. ಇದು ಅವರದೇ ಆದ ಕೃತಿ. ಆದ್ದರಿಂದ ಇದು ಕಾವ್ಯ. ಮತ್ತೊಬ್ಬರು ಬರೆಯಲಾಗದ ಕೃತಿ .ಇದನ್ನೇ ಪಂಚರಾತ್ರ ಹೇಳಿದ್ದು -

ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।
ಕೋ ಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃತ್ ಭವೇತ್ ॥

ಉಳಿದ ಕವಿಗಳಿಗೆ ಇದನ್ನು ಪೂರ್ಣವಾಗಿ ವರ್ಣಿಸಲೂ ಸಾಧ್ಯವಿಲ್ಲ. ಇದರಲ್ಲಿ ಹೇಳದ ವಿಷಯಗಳಿಲ್ಲ. ನಿಬಿಡ ಅಜ್ಞಾನಾಂಧಕಾರದಲ್ಲಿ ಮುಳುಗಿದ ಜಗತ್ತಿಗೆ ಭಾರತಸೂರ್ಯನಿಲ್ಲದಿದ್ದರೆ ನಿತ್ಯ ಕತ್ತಲೆಯೇ ಗತಿಯಾಗುತ್ತಿತ್ತು. ಈ ಜ್ಞಾನದ ದೀವಿಗೆ ಕಾಣದಿದ್ದರೆ ಕುರುಡನಂತೆ, ಕಿವುಡನಂತೆ, ಹುಚ್ಚನಂತಾಗುತ್ತಿತ್ತು. ಗಾತ್ರದಲ್ಲಿ, ಅರ್ಥದಲ್ಲಿ, ವಿಚಾರದಲ್ಲಿ, ವಿಮರ್ಶೆಯಲ್ಲಿ, ವಿಷಯಗಳಲ್ಲಿ ಇಷ್ಟು

ಬೃಹತ್‌ಗ್ರಂಥ ಜಗತ್ತಿನಲ್ಲಿ ಇನ್ನೊಂದಿಲ್ಲ. ಇದು ಅರ್ಥಶಾಸ್ತ್ರದ ಸಂಪತ್ತು, ಧರ್ಮಶಾಸ್ತ್ರದ ಸಂವಿಧಾನ. ಮುಮುಕ್ಷುಗಳ ಮೋಕ್ಷಪುರದ ರಾಜಮಾರ್ಗ . ದ್ವಿಜರಿಗೆ ಬೇಕಾದ ವೇದದ ಸಾರ, ಯೋಗಿಗಳ ತತ್ತ್ವವಿಚಾರ ಇಲ್ಲಡಗಿದೆ. ಇದರ ಅರಿವಿಲ್ಲದೆ ಭೂಮಿಯ ಅಂಚಿನಲ್ಲಿರುವ ನಾವು ಆಕಾಶದಂಚಿಗೆ ಏರಲಾರೆವು. ವೇದವನರಿಯದವರಿಗೆ ವೇದದ ಅರಿವು ಇದರಿಂದ. ಆದ್ದರಿಂದಲೇ ಇದು ಕಾರ್ಷ್ಣ್ಯ ವೇದ . ಆದ್ದರಿಂದಲೇ ಇದರಲ್ಲಿ ಏನೂ ಕಪಟವಿಲ್ಲ, ಕುಹಕವಿಲ್ಲ. ಇಷ್ಟೇ ಅಲ್ಲದೇ ಎಲ್ಲ ಶಾಸ್ತ್ರಗಳಿಗೆ ಸಂಬಂಧ ಪಟ್ಟ ವಿಷಯಗಳು ಇಲ್ಲಿದೆ . ಆದ್ದರಿಂದಲೇ -

ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ । ಎಂದಿದ್ದು.

## ರಚನೆ – ರಚನೆಯ ಕಾಲ

ಮಹಾಭಾರತ ರಚನೆಯ ವಿಷಯದಲ್ಲಿ ವೇದವ್ಯಾಸದೇವರು ತಮ್ಮ ಕ್ರಮ ಹೇಳಿದ್ದಾರೆ . ಮೊದಲಿಗೆ ಎಂಟು ಸಾವಿರದ ಎಂಟು ನೂರು ಶ್ಲೋಕಗಳಲ್ಲಿ ಸಂಕ್ಷೇಪವಾಗಿ ಮಹಾಭಾರತದ ಪ್ರಧಾನಕಥೆಯನ್ನು ಹೇಳಿದ್ದಾರೆ . ನಂತರ ಇಪ್ಪತ್ತು ನಾಲ್ಕು ಸಾವಿರ ಶ್ಲೋಕಗಳಲ್ಲಿ ವಿಸ್ತಾರವಾಗಿ ಅದನ್ನೇ ಹೇಳಿದರು . ಇಲ್ಲಿ ಕಥೆಗಳ ಮಧ್ಯದಲ್ಲಿ ಬೇರೆ ಬೇರೆ ಆಖ್ಯಾನಗಳು ಸೇರಿ ಒಟ್ಟು ಒಂದು ಲಕ್ಷ ಶ್ಲೋಕಗಳಾಗುತ್ತದೆ. ಇದನ್ನು ಸ್ಪಷ್ಟವಾಗಿ ವೇದವ್ಯಾಸರೇ ಹೇಳಿದ್ದಾರೆ.

ಇದಂ ಶತಸಹಸ್ರಂ ತು ಲೋಕಾನಾಂ ಪುಣ್ಯಕರ್ಮಣಾಮ್ ।
ಉಪಾಖ್ಯಾನೈ: ಸಹ ಜ್ಞೇಯಂ ಆದ್ಯಂ ಭಾರತಮುತ್ತಮಮ್ ॥
ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತಸಂಹಿತಾಂ ।
ಉಪಾಖ್ಯಾನೈರ್ವಿನಾ ತಾವದ್ ಭಾರತಂ ಪ್ರೋಚ್ಯತೇ ಬುಧೈ: ॥ ಆದಿ 102-103

ಮಹಾಭಾರತದ ರಚನೆಯ ಕಾಲವನ್ನು ಕುರಿತು ಅನೇಕರು ಅನೇಕವಿಚಾರಗಳನ್ನು ಮಂಡಿಸುತ್ತಾರೆ . ಆದರೆ ಮಹಾಭಾರತದಲ್ಲೇ ಇದರ ರಚನೆಯ ಕಾಲವನ್ನು ಹೇಳಿದ್ದಾರೆ .

ಇತಿಹಾಸಮಿಮಂ ಚಕ್ರೇ ಪುಣ್ಯಂ ಸತ್ಯವತೀ ಸುತಃ ।
--- ಉತ್ಪಾದ್ಯ ಧೃತರಾಷ್ಟ್ರಂ ಚ ಪಾಂಡುಂ ವಿದುರಮೇವ ಚ ।....
ತೇಷು ಜಾತೇಷು ವೃದ್ಧೇಷು ಗತೇಷು ಪರಮಾಂ ಗತಿಂ ।
ಅಬ್ರವೀತ್ ಭಾರತಂ ಲೋಕೇ ಮಾನುಷೇಸ್ಮಿನ್ ಮಹಾನ್ ಋಷಿಃ ।
ಜನಮೇಜಯೇನ ಪೃಷ್ಟ ಸನ್ .....॥

ವೇದವ್ಯಾಸದೇವರು ಮಹಾಭಾರತಗ್ರಂಥವನ್ನು ಬರೆದರು . ನಂತರ ವೇದವ್ಯಾಸರಿಂದ ಧೃತರಾಷ್ಟ್ರ, ಪಾಂಡು , ವಿದುರರು ಹುಟ್ಟಿದರು . ಪಾಂಡುವಿನಿಂದ ಪಾಂಡವರು ಹುಟ್ಟಿ, ಜಗತ್ತನ್ನು ಬೆಳಗಿದರು. ತಮ್ಮ ಕಾರ್ಯಮುಗಿದ ಮೇಲೆ ತಿರುಗಿ ತಮ್ಮ ಲೋಕಗಳಿಗೆ ಹೊರಟು ಹೋದರು . ಪಾಂಡವರಲ್ಲಿ ಅರ್ಜುನನ ಮಗ ಅಭಿಮನ್ಯು. ಅವನ ಮಗ ಪರೀಕ್ಷಿತ. ಅವನ ಮಗ ಜನಮೇಜಯ . ತನ್ನ ತಂದೆ ತಕ್ಷಕನಿಂದ ಸತ್ತ ಸುದ್ದಿ ಕೇಳಿ ಸರ್ಪಸತ್ರ ಮಾಡಿದ. ಯಾಗದ ನಡುವೆ ಸಮಯಾವಕಾಶವಿರುತ್ತಿತ್ತು, ಆಗ ತಮ್ಮ ಪೂರ್ವಿಕರಾದ ಪಾಂಡವರ ಚರಿತ್ರೆಯನ್ನು ಹೇಳಬೇಕೆಂದು ವೇದವ್ಯಾಸದೇವರನ್ನು ಪ್ರಾರ್ಥಿಸಿದನು. ಆಗ ತಮ್ಮ ಶಿಷ್ಯರಾದ ವೈಶಂಪಾಯನರಿಗೆ ಪ್ರವಚನ ಹೇಳಲು ಆಜ್ಞೆಮಾಡಿದರು ವೇದವ್ಯಾಸರು. ಮಹಾಭಾರತ ಭೂಲೋಕದಲ್ಲಿ ಆಗ ಪ್ರಚಾರಕ್ಕೆ ಬಂದಿತು. ಆದರೆ ಇದಕ್ಕೂ ಮೊದಲು ತಮ್ಮ ಶಿಷ್ಯರಾದ ನಾರದ, ಶುಕಾದಿಗಳ ಮೂಲಕ ದೇವಲೋಕ ಗಂಧರ್ವಲೋಕಗಳಲ್ಲಿ ಪ್ರಚಾರಕ್ಕೆ ತಂದಿದ್ದರು. ಆದ್ದರಿಂದ ಇದು ಧೃತರಾಷ್ಟ್ರಾದಿಗಳು ಹುಟ್ಟುವ ಮೊದಲೇ ಬರೆದ ಗ್ರಂಥವಿದು. ಪಾಂಡವರು ಪರಂಧಾಮವನ್ನು ಸೇರಿದ ಕೆಲ ವರ್ಷಗಳ ನಂತರ ಪ್ರಚಾರಕ್ಕೆ ಬಂದದ್ದು ಎಂದು ಸಿದ್ಧವಾಗುತ್ತದೆ . ಮಹಾಭಾರತದ ಕಾಲ ಕ್ರಿ.ಪೂ. 3000 ಸುಮಾರಿಗೆ ಎಂದು ಅನೇಕ ಪೌರ್ವಾತ್ಯ ಹಾಗು ಪಾಶ್ಚಿಮಾತ್ಯ ಇತಿಹಾಸಜ್ಞರು ಅಂಗೀಕರಿಸಿದ, ಸಂಪ್ರದಾಯದಿಂದಲೂ ಅಂಗೀಕೃತವಾದ ಮಾತು. ಇದರಿಂದ ಕ್ರಿ.ಪೂ.3000 ಕ್ಕೂ ಮೊದಲಿನ ಅತಿ ಪ್ರಾಚೀನವಾದ ವೈದಿಕ ಸಂಸ್ಕೃತಿಗೆ ಬೆನ್ನೆಲುಬಾಗಿರುವ ಗ್ರಂಥವಿದು ಎಂದು ಸಿದ್ಧವಾಗುತ್ತದೆ.

## ಮಧ್ವಾಚಾರ್ಯರು – ಮಹಾಭಾರತತಾತ್ಪರ್ಯ ನಿರ್ಣಯ

ಜಗತ್ತಿನಲ್ಲಿ ಅನಾದಿಕಾಲದಿಂದಲೂ ನಡೆದು ಬಂದಿರುವುದು ಶ್ರೀಮದ್ವೈಷ್ಣವಸಿದ್ಧಾಂತ . ಈ ಸಿದ್ಧಾಂತಕ್ಕೆ ಧಕ್ಕೆ ಬಂದಾಗಲೆಲ್ಲ ಸಜ್ಜನರ ಸಂರಕ್ಷಣೆಗಾಗಿ ಪರಮಾತ್ಮ ಜ್ಞಾನಾವತಾರಗಳಿಂದ ಅಜ್ಞಾನ ಕಳೆದಿದ್ದಾನೆ. ಜ್ಞಾನ ನೀಡಿದ್ದಾನೆ. ಬಲಾವತಾರಗಳಿಂದ ಬಾಹ್ಯ ಪ್ರತಿಬಂಧಕ ಕಳೆದು ಸಲುಹಿದ್ದಾನೆ . ದುಷ್ಟರ ಮೋಹಕ್ಕಾಗಿ ರುದ್ರದೇವರು ಪರಮಾತ್ಮನ ಆಜ್ಞೆಯಂತೆ ಮೋಹಕವಾದ ಶಾಸ್ತ್ರಗಳನ್ನು

ರಚಿಸಿದರು. ಆದರಂತೆ ದುಷ್ಟರಾದ ಕಲ್ಯಾದಿದೈತ್ಯರು ಜನರಲ್ಲಿ ಹೊಕ್ಕು ಅಜ್ಞಾನಮಿಥ್ಯಾಜ್ಞಾನಗಳನ್ನು ತಂದೊಡ್ಡಿದರು. ಭಕ್ತರ ಮೊರೆ ಕೇಳಿ ಪರಮಾತ್ಮ ವೇದವ್ಯಾಸರಾಗಿ ಉದಿಸಿ ಬಂದ. ಅಜ್ಞಾನ ಕಳೆದು ಜ್ಞಾನವನ್ನು ಬೆಳಗಿದ. ಬ್ರಹ್ಮಸೂತ್ರಾಮೃತಮಳೆಗರೆದು, ವೇದವಿಭಜಿಸಿ ಸಜ್ಜನರನ್ನು ಮುಕ್ತಿ ಪಥಕ್ಕೆ ಒಯ್ದಿದ್ದಾನೆ. ಸೂತ್ರಗಳು ನಿರ್ಣಾಯಕ ಗ್ರಂಥಗಳಲ್ಲಿ ಅತ್ಯುತ್ತಮ. ನಿರ್ಣಯ ಗ್ರಂಥಗಳಲ್ಲಿ ಅತ್ಯುತ್ತಮವಾದದ್ದು ಮಹಾಭಾರತ. ಇದರ ರಚನೆಯಿಂದ ಸಕಲರಿಗೆ ವೇದಜ್ಞಾನವನ್ನು ಒದಗಿಸಿ ಮುಕ್ತಿಯ ಮಾರ್ಗವನ್ನು ತೋರಿದ್ದಾನೆ. ಆದರೆ ಈ ಗ್ರಂಥಗಳ ಬಗೆಗೂ ಅಯಥಾರ್ಥಜ್ಞಾನದ ಕತ್ತಲೆ ಕವಿಯಿತು. ಆಗ ದಿವಿಜರ ಮೊರೆ ಲಾಲಿಸಿ, ಹರಿಯ ಅಪ್ಪಣೆಯನ್ನು ಶಿರಸಾ ಆದರಿಸಿ ತತ್ತ್ವಜ್ಞಾನಸೂರ್ಯರಾದ ಭಾರತೀಶರು ಆನಂದತೀರ್ಥರಾಗಿ ಭುವಿಗಿಳಿದರು.

## ಮಹಾಭಾರತತಾತ್ಪರ್ಯ ನಿರ್ಣಯಕ್ಕೆ ಶ್ರೀಕಾರ

ಮಹಾಭಾರತದ ಗೂಢಭಾವ ಬಲ್ಲವರು ವೇದವ್ಯಾಸರೊಬ್ಬರೇ. ನಂತರ ಸಮಗ್ರ ಚೇತನ ವರ್ಗದಲ್ಲಿ ರಮೆಯರಸನ ಸಮಗ್ರ ಹಾರ್ದವನ್ನು ಅವನ ಅನುಗ್ರಹದಿಂದ ಬಲ್ಲವರು ಬ್ರಹ್ಮದೇವರು ಮತ್ತು ಆ ಬ್ರಹ್ಮದೇವರ ಪದವಿಗೆ ಬರುವ ವಾಯುದೇವರು. ಆ ವಾಯುದೇವರೇ ತತ್ತ್ವಜ್ಞಾನಪ್ರಚಾರಕ್ಕಾಗಿ ಭುವಿಗೆ ಬಂದಿಳಿದಿರುವಾಗ ಈ ದೇವಮಾನವಕೋಟಿಯ ಉದ್ಧಾರಕ್ಕಾಗಿ ತನ್ನ ಭಾವವನ್ನು ಪ್ರಕಟಿಸುವದಕ್ಕಾಗಿ ಹಾಗು ಮಹಾಭಾರತದ ನಿಗೂಢತತ್ತ್ವಗಳ ಪ್ರಕಾಶಕ್ಕಾಗಿ ವೇದವ್ಯಾಸರು ಆಜ್ಞಾಪಿಸಿದರು . ವೇದವ್ಯಾಸರ ಭಾವವನ್ನು ಚೆನ್ನಾಗಿ ಸಮಗ್ರವಾಗಿಬಲ್ಲವರಿವರು. ಅನಾದಿ ಕಾಲದಿಂದಲೂ ಅಜ್ಞಾನ- ವಿಪರೀತಜ್ಞಾನ- ಸಂಶಯದ ಸೋಂಕಿಲ್ಲದವರು. ಆದ್ದರಿಂದಲೇ ಇವರು ಪಸರಿಸಿದ ವೈಷ್ಣವಸಿದ್ಧಾಂತ ನಿರ್ದುಷ್ಟವಾದದ್ದು. ಅಂತಹ ಶ್ರೀಮದಾಚಾರ್ಯರನ್ನು ಧನ್ಯರು ಎಂದು ತಿಳಿದು ವೇದವ್ಯಾಸರು ಆಜ್ಞೆ ಮಾಡಿದರು . ಈ ಗ್ರಂಥ ಸೂರ್ಯನ ಉದಯವಾಯಿತು . ಆಚಾರ್ಯರೇ ಈ ವಿಷಯವನ್ನು ಹೇಳುತ್ತಾರೆ.

ಕಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತ: ।
ಹರಿಣಾ ನಿರ್ಣಯಾನ್ ವಚ್ಮಿ ವಿಜಾನನ್ ತತ್ಪ್ರಸಾದತ: ॥ ಮ.ತಾ.ನಿ.2-5
ನಾರಾಯಣೇನಾಭಿಹಿತೋ ಬದರ್ಯಾಂ ತಸ್ಯೈವ ಶಿಷ್ಯೋ ಜಗದೇಕಭರ್ತು: ।.....
ಗ್ರಂಥ: ಕೃತೋಽಯಂ ಜಗತಾಂ ಜನಿತ್ರಂ ಹರಿಂ ಗುರುಂ ಪ್ರೀಣಯತಾಮುನೈವ ॥ ಮ.ತಾ.ನಿ. 32-167,169
ವ್ಯಾಸಾಜ್ಞಯಾ ಭಾಷ್ಯವರಂ ವಿಧಾಯ ... ತನುಸ್ಮೃತೀಯಾ ಪವನಸ್ಯ ಸೇಯಂ ಸದ್ಭಾರತಾರ್ಥಪ್ರತಿಪಾದನಾಯ ।
ಗ್ರಂಥಂ ಚಕಾರೇಮಮುದೀರ್ಣವಿದ್ಯಾ ಯಸ್ಮಿನ್ ರಮಂತೇ ಹರಿಪಾದಭಕ್ತಾ: ॥ ಮ.ತಾ.ನಿ. 32-173

ಇದನ್ನೇ ನಾರಾಯಣಪಂಡಿತಾಚಾರ್ಯರೂ ಹೇಳುತ್ತಾರೆ.

ಪಾರಾಶರ್ಯ: ಪರತತ್ತ್ವಪ್ರಸಿದ್ಧ್ಯೈ ತಾತ್ಪರ್ಯಾರ್ಥಂ ಪರಮಂ ಭಾರತಸ್ಯ ।
ವ್ಯಕ್ತಂ ವಕ್ತುಂ ನಿಯುನಕ್ತಿ ಸ್ಮ ಸಾಕ್ಷಾದೇನಂ ಧನ್ಯಂ ಭುವನೇ ಮನ್ಯಮಾನ: ॥

ಶ್ರೀಮದಾಚಾರ್ಯರು ತಾವು ಸಮಗ್ರ ಭಾರತವನ್ನು ಸಂಚಾರ ಮಾಡಿದರು. ಸಂಚಾರಮಾಡಿದಲ್ಲೆಲ್ಲಾ ಸಿಕ್ಕ ನಿರ್ಣಯ ಗ್ರಂಥಗಳನ್ನು ಮತ್ತು ಮಹಾಭಾರತದ ಪ್ರತಿಗಳನ್ನು ನೋಡಿದರು. ತಾವು ಶ್ರೀವೇದವ್ಯಾಸರ ಮುಖದಿಂದ ಕೇಳಿದ ಮೂಲ ಗ್ರಂಥದ ಮೂಲಪಾಠವನ್ನು ಅನುಸರಿಸಿ, ನಿರ್ಣಯಗ್ರಂಥಗಳಿಗೆ ಅನುಗುಣವಾಗಿ ನಿರ್ಣಯ ಮಾಡಿ ಈ ಗ್ರಂಥವನ್ನು ಬರೆದರು.

ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್ ।
ಯಥಾ ಸ ಭಗವಾನ್ ವ್ಯಾಸ: ಸಾಕ್ಷಾನ್ನಾರಾಯಣ: ಪ್ರಭು: ।
ಜಗಾದ ಭಾರತಾದ್ಯೇಷು ತಥಾ ವಕ್ಷ್ಯೇ ತದೀಕ್ಷಯಾ ॥ ಮ.ತಾ.ನಿ.2-7

## ಮಹಾಭಾರತತಾತ್ಪರ್ಯ ನಿರ್ಣಯ

ಮಹಾಭಾರತತಾತ್ಪರ್ಯ ನಿರ್ಣಯ ಹೆಸರೇ ಹೇಳುವಂತೆ ಪ್ರಧಾನವಾಗಿ ಮಹಾಭಾರತದ ತಾತ್ಪರ್ಯವನ್ನು ನಿರ್ಣಯ ಮಾಡಲು ಹೊರಟಿದೆ. ಜೊತೆಗೆ ಪುರಾಣ ಹಾಗು ಸರ್ವಶಾಸ್ತ್ರನಿರ್ಣಯ ಮಾಡುವದಕ್ಕಾಗಿ ಬರೆದ ಕೃತಿ. ಇದು ಶ್ರೀಮದಾಚಾರ್ಯರು ಇತಿಹಾಸಪುರಾಣಪ್ರಪಂಚಕ್ಕೆ ನೀಡಿದ ಅಪೂರ್ವ ಕೊಡುಗೆ. ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಆಚಾರ್ಯರ ಮೊದಲಿಗೆ ಬಂದ ಯಾವ ಆಚಾರ್ಯರೂ ಕೂಡ ಇತಿಹಾಸ ಪ್ರಸ್ಥಾನವನ್ನೇ ಮುಟ್ಟಲಿಲ್ಲ. ಬೇರೆ ಯಾರೂ ಮಾಡದ ಅಪೂರ್ವ ನಿರ್ಣಯ ರತ್ನಗಳು ಇಲ್ಲಿವೆ. -ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ - ಎಂಬ ಮಾತಿನ ಅಕ್ಷರ ಅಕ್ಷರಕ್ಕೆ ಜೀವಕಳೆ ತಂದವರು ಆಚಾರ್ಯರು. ಇತಿಹಾಸ ಪುರಾಣಗಳೊಡನೆ ವೇದವನ್ನು ಹೊಂದಿಸುವ ಪರಿಯನ್ನು ಜಗತ್ತಿಗೆ ತೋರಿಸಿದರು. ಅಷ್ಟೇ ಅಲ್ಲದೆ ಬ್ರಹ್ಮಸೂತ್ರದ ಸಿದ್ಧಾಂತವೇ

ಸತ್ಸಿದ್ಧಾಂತದ ಅಭಿಪ್ರಾಯ. ಅದರ ಆಧಾರದ ಮೇಲೆ ವೇದೇತಿಹಾಸಪುರಾಣಗಳ ಸಿದ್ಧಾಂತವನ್ನು ಕಟ್ಟಿದ ಏಕೈಕ ಆಚಾರ್ಯರು. ಇವುಗಳಿಗೆ ಏಕವಾಕ್ಯತೆಯನ್ನು ಪ್ರತಿಪಾದಿಸಿದ ಅದ್ವಿತೀಯ ಆಚಾರ್ಯರು. ಇವೆಲ್ಲಕ್ಕೂ ಅಧ್ಯಾತ್ಮದ ಹಿನ್ನೆಲೆ ತೋರಿದ ಮಹಾದಾರ್ಶನಿಕರು. ಅದಕ್ಕಾಗಿಯೇ ವೇದಮಾತೆ ತನ್ನ ಈ ಮುದ್ದು ಮಗನನ್ನು ಮಾತು ಮಾತಿಗೆ ಮಧ್ವ ಎಂದು ಕರೆದಿದೆ. ಇಲ್ಲಿಯ ಪ್ರತಿಯೊಂದು ವಾಕ್ಯ, ಪದ, ಅಕ್ಷರಗಳಲ್ಲಿ ಅಮೂಲ್ಯ ನಿರ್ಣಯಗಳನ್ನು ತುಂಬಿದ್ದಾರೆ. ಅತ್ಯಮೂಲ್ಯವಾದ ಪುರಾಣಜ್ಞರಿಗೆ ಹಾಗು ಅಧ್ಯೇತೃಗಳಿಗೆ ತಿಳಿಯಲೇ ಬೇಕಾದ ಸಂಗತಿಗಳಿವೆ .ಪ್ರಾಚೀನ ಋಷಿ ಮುನಿಗಳಿಂದ ಅಂಗೀಕೃತವಾದ ಇತಿಹಾಸ ಪುರಾಣಗಳ ರಚನೆಯ ಕ್ರಮ, ಸಪ್ತಭೇದಗಳು, ಮಹಾಭಾರತದ ಗುಹ್ಯ -ದರ್ಶನ - ಸಮಾಧಿಗಳೆಂಬ ಭಾಷಾತ್ರಯ, ಅವುಗಳ ಪ್ರಭೇದ, ಮನ್ವಾದಿ -ಆಸ್ತಿಕಾದಿ - ಉಪರಿಚರಾದಿ ಎಂಬ ಅರ್ಥತ್ರಯದ ವಿಚಾರ ಮುಂತಾದ ಅಪೂರ್ವವಿಚಾರಗಳನ್ನು ತಿಳಿಸಿದವರು ಶ್ರೀಮದಾಚಾರ್ಯರೊಬ್ಬರೇ. ಶ್ರೀಮದಾಚಾರ್ಯರ ಇನ್ನೊಂದು ಅಮೂಲ್ಯ ಕೃತಿ ಭಾಗವತತಾತ್ಪರ್ಯ.  ಆ ಭಾಗವತತಾತ್ಪರ್ಯದಲ್ಲಿ ತಾವೇ ಪ್ರಮಾಣಪುರಸ್ಸರವಾಗಿ  ಪುರಾಣಗಳನ್ನು ನಿರ್ಣಯಮಾಡುವ ನ್ಯಾಯಗಳನ್ನು  ಹೇಳಿದ್ದಾರೆ. ಅವುಗಳನ್ನು ಭಾಗವತ ಪುರಾಣದಲ್ಲಿ ಸಮನ್ವಯಮಾಡಿ ನಿರ್ಣಯಮಾಡಿದ್ದಾರೆ. ಅದರ ಚಾಲನೆಯನ್ನು ಮಾಡಿ ನಿರ್ಣಯ ಮಾಡುವ ಕ್ರಮ ಇಲ್ಲಿಯೂ ತೋರಿದ್ದಾರೆ. ಇಷ್ಟಾದರೂ ಮಹಾಭಾರತವನ್ನು ನಿರ್ಣಯ ಮಾಡುವ ಕ್ರಮ ಪುರಾಣದಂತೆ ಅಲ್ಲ, ಅನೇಕ ಕಡೆ ವಿಭಿನ್ನವಾಗಿದೆ. ಪುರಾಣದ ಕ್ರಮವೇ ಬೇರೆ. ಆದರೂ ಪುರಾಣನಿರ್ಣಯ ಮಾಡುವ ಪದ್ಧತಿಯ ಬಹುಭಾಗ ಇಲ್ಲಿಯೂ ಅನುಸೃತವಾಗಿದೆ. ಇವೆಲ್ಲವೂ ಅಪೂರ್ವವೇ. ಸರ್ವಜ್ಞರಲ್ಲದವರಿಗೆ ಆಗದ ಕಾರ್ಯವೇ. ಭಾಗವತತಾತ್ಪರ್ಯ ನಿರ್ಣಯ ಮಾಡುವಾಗ ಭಾಗವತದ ಮೂಲಕ್ಕೆ ನಿರ್ಣಯ ಮಾಡುತ್ತಾ ಪುರಾಣ ನಿರ್ಣಯಕ್ರಮ ತೋರಿದ ಆಚಾರ್ಯರು. ಇಲ್ಲಿ ಮೂಲಕ್ಕೆ ಸಾಕ್ಷಾತ್ತಾಗಿ ವ್ಯಾಖ್ಯಾನ ಮಾಡದೇ ಅದರ ತಾತ್ಪರ್ಯವನ್ನು ಮಾತ್ರ ನಿರ್ಣಯಮಾಡುತ್ತಾರೆ. ಅನೇಕ ಕಡೆ ಮೂಲ ಶ್ಲೋಕದ ವ್ಯಾಖ್ಯಾನವನ್ನೂ ಮಾಡುತ್ತಾರೆ. ತಾವೇ ಹೇಳಿದಂತೆ ಇದು - ವಿಶೇಷತೋ ಭಾರತವರ್ತ್ಮಚಾರಿ- ಆದರೂ ಸಮಸ್ತಶಾಸ್ತ್ರನಿರ್ಣಯ ಹಾಗು ಮಹಾಭಾರತನಿರ್ಣಯ ಇದರಲ್ಲಿದೆ. ಇನ್ನೊಂದು ಅಪೂರ್ವವಾದ ಊಹಿಸಲೂ ಅಸಾಧ್ಯವಾದ ಕೆಲಸ ಮಹಾಭಾರತದ ಘಟನೆಗಳನ್ನು ಹೊಂದಿಸುವದು. ಮಹಾಭಾರತ , ಹರಿವಂಶ, ಭಾಗವತ ಮತ್ತು ಪುರಾಣಗಳನ್ನು ಓದಿದವರಿಗೆ ಯಾವ ಘಟನೆಯ ನಂತರ ಯಾವ  ಘಟನೆ,  ಎಲ್ಲಿ, ಯಾವ ಸ್ಥಳದಲ್ಲಿ, ಯಾವುದು ಸರಿ, ಯಾವುದು ಅಲ್ಲ ಎನ್ನುವ ಗೊಂದಲ ಕಗ್ಗಂಟುಗಳು ಬಹಳ. ಇವೆಲ್ಲವನ್ನು ಬಗೆಹರಿಸಿ ಅದರ ಕ್ರಮವನ್ನು ಅರುಹಿದರು ಆಚಾರ್ಯರು.

ಅಷ್ಟೇ ಅಲ್ಲ ಮಹಾಭಾರತದ ಘಟನೆಗಳಲ್ಲಿ, ಪಾತ್ರಗಳಲ್ಲಿ ದಿವ್ಯತೆ ತುಂಬಿದೆ . ದೇವರಹಸ್ಯಗಳು ಅಡಗಿದೆ. ಒಂದು ಘಟನೆಯಿಂದ ಇನ್ನೊಂದು ಘಟನೆಗೆ ವರಶಾಪಗಳ ಕೊಂಡಿಗಳಿವೆ. ರಾಮಾಯಣದ ಘಟನೆಗಳ ಸಂಬಂಧ ಮಹಾಭಾರತದ ಘಟನೆಗಳಿಗಿದೆ. ದೇವಾಸುರರ ಅನಾದಿಯಾದ ಸ್ವಭಾವವನ್ನು ಅನುಸರಿಸಿದೆ. ದೇವತೆಗಳೇ ಮುಂತಾದವರ ನಿಯಮಗಳನ್ನು ಒಳಗೊಂಡ ನಡುವಳಿಕೆಗಳಿವೆ. ಇವೆಲ್ಲವನ್ನು ತಿಳಿಸುತ್ತಾ, ದೇವತೆಗಳ ಶಕ್ತಿ ತಾರತಮ್ಯ, ಯೋಗ್ಯತೆ, ಜ್ಞಾನ, ಇವೆಲ್ಲವನ್ನು ನಿರ್ಣಯಮಾಡಿ ಹೇಳುತ್ತಾರೆ. ರಾಮಾಯಣ-ಮಹಾಭಾರತದಲ್ಲಿ ಬರುವ ಇಂದಿಗೂ ವಿವಾದಾಸ್ಪದವಾಗಿರುವ ಪ್ರಶ್ನೆಗಳಿಗೆ ಇಲ್ಲಿ ವಿವರಿಸಿದ ಉತ್ತರವಲ್ಲದೇ ಬೇರೆ ಯಾವ ಉತ್ತರವನ್ನೂ ಹೇಳಲು ಸಾಧ್ಯವಿಲ್ಲ.

ಭಗವಂತನ ನಿರ್ದೋಷತ್ವ, ಸಕಲಗುಣಪರಿಪೂರ್ಣತ್ವ ಮುಂತಾದವುಗಳು, ಪಂಚಭೇದ, ಮುಕ್ತಿಸಾಧನ, ಭಗವತ್ಪ್ರಸಾದ , ಭಕ್ತಿ , ಶ್ರವಣಾದಿಗಳ ಆವಶ್ಯಕತೆ, ಗುರುಗಳು, ಅವರ ಲಕ್ಷಣ, ಅವರ ಅನುಗ್ರಹ, ಅದರ ಆವಶ್ಯಕತೆ , ಭಗವಂತನ ನಿದುರ್ಸ್ಪೃತೆಯನ್ನು ಸಾರುವ ಗ್ರಂಥಗಳು, ಅವುಗಳ ಪ್ರಾಮಾಣ್ಯ, ಅವುಗಳಿಗೆ ವಿರುದ್ಧವಾದ ಸಿದ್ಧಾಂತಗಳು, ಅವುಗಳ ರಚನೆಗೆ ಕಾರಣ, ಮಹಾಭಾರತದ ಮಹತ್ವ, ಭೂಭಾರಹರಣಕ್ಕೆ ಪ್ರಧಾನ ಅಂಗರಾದ ಭೀಮ -ದ್ರೌಪದಿಯರ ಶ್ರೇಷ್ಠತ್ವ, ಇತರ ದೇವತೆಗಳ ಶಕ್ತಿ ಜ್ಞಾನಾದಿಗಳು, ರಾಮಾವತಾರ - ಕೃಷ್ಣಾವತಾರಗಳಲ್ಲಿ ಸಕಲ ದೇವತೆಗಳ ಪಾತ್ರ , ಅವರೆಡರ ಮಹತ್ವ, ಈ ಎಲ್ಲ ವಿಷಯದ ಬಗ್ಗೆ ಪ್ರಮಾಣೋದಾಹರಣ, ಸೃಷ್ಟಿಯ ವಿವರಣೆ, ರಾಮಕೃಷ್ಣಾವತಾರವಲ್ಲದೆ ಇನ್ನುಳಿದ ಅವತಾರಗಳ ನಿರ್ಣಯ, ರಾಮಾವತಾರ ಕಾಲದಲ್ಲಿ ಆದ ದೇವಾವತಾರಗಳು, ಅಂಶ ಆವೇಶಗಳು, ಅಲ್ಲಿ ದೈತ್ಯದಾನವರ ವರ-ಶಾಪ,ಅಹಲ್ಯಾಪ್ರಸಂಗ, ಪರಶುರಾಮ -ರಾಮ ಸಮಾಗಮ, ಕಾಕಾಸುರ ಕಥಾ, ಸೀತಾಕೃತಿ ವಿಷಯ, ವಾಲಿವಧ, ಸುಂದರಕಾಂಡ, ಅಗ್ನಿ ಪರೀಕ್ಷೆ, ರಾಮದೇವರ ಬಂಧನದ ನಿರ್ಣಯ, ಸೀತಾತ್ಯಾಗದ ವಿಷಯ, ಸಮುದ್ರಮಥನ, ವಾಯುದೇವರ ವಿಷಭಕ್ಷಣ, ವ್ಯಾಸಾವತಾರ ಕಥಾ ನಿರ್ಣಯ,  ಶಂತನು ಕಥಾ, ಭೀಷ್ಮರ ಜನ್ಮದ ಹಿನ್ನಲೆ, ದೇವತೆಗಳ ಮಹಾನಿಯಮಗಳು, ಶಿಖಂಡಿಯ ಕಥಾ, ತಾರಕಾಮಯ ಸಂಗ್ರಾಮ, ಕೃಷ್ಣ-ಪಾಂಡವರ - ಕೌರವರ ಹುಟ್ಟು , ಕಂಸಾದಿಗಳ ಸಂಹಾರ ನಿರ್ಣಯ, ಏಕಲವ್ಯ ಪ್ರಸಂಗ, ಭೀಮಸೇನದೇವರ ಶುದ್ಧ ಭಾಗವತ ಧರ್ಮನಿಷ್ಠತೆ, ಇತರರ ವೈಫಲ್ಯ, ದ್ರೌಪದಿಯ ಜನ್ಮಜನ್ಮಾಂತರದ ಕಥೆ, ದ್ರೌಪದಿ ವಿವಾಹ, ಅವಳ ಪಂಚಪತಿತ್ವ ಹಾಗು ದ್ರೌಪದಿಭೋಗದ ನಿರ್ಣಯ, ರಾಜಸೂಯಯಾಗ, ಅದರ ಸಂಪೂರ್ಣಫಲದ ವಿಚಾರ, ದ್ರೌಪದಿ - ಧರ್ಮರಾಜ - ಭೀಮಸೇನದೇವರ ಸಂವಾದ ಮೂಲಕವಾಗಿ ಅತ್ಯಮೂಲ್ಯವಾದ ಜೀವಕರ್ತೃತ್ವ ವಿಚಾರ, ದೇವತೆಗಳ ಶಕ್ತಿ ಮುಂತಾದವುಗಳು ಯುಗಾನುಸಾರವಾಗಿ ಆಗುವ ಅಭಿವ್ಯಕ್ತಿ ಯಕ್ಷಪ್ರಶ್ನ, ಅಜ್ಞಾತವಾಸ, ಶ್ರೀಕೃಷ್ಣನ ದೌತ್ಯ, ಶ್ರೀಕೃಷ್ಣನ ಗೀತಾ ಉಪದೇಶದ

ಸಂಗ್ರಹ, ಯುದ್ಧಪರ್ವಗಳ ನಿರ್ಣಯ, ದುರ್ಯೋಧನ ವಧೆಯ ಧರ್ಮಾಧರ್ಮಗಳ ನಿರ್ಣಯ, ಭೀಷ್ಮರ ಉಪದೇಶದ ಸಂಗ್ರಹ, ಅಶ್ವಮೇಧ ಸಂದರ್ಭದಲ್ಲಿ ಅರ್ಜುನನ ಪ್ರಾರಬ್ಧ ನಿರ್ಣಯ, ಶ್ರೀಕೃಷ್ಣ ಪಾಂಡವರ ಪರಂಧಾಮ ಗಮನ ನಿರ್ಣಯ, ಧರ್ಮರಾಜನ ಮಿಥ್ಯಾ ನರಕ ದರ್ಶನ, ಬುದ್ಧಾವತಾರ ಕಾರಣ, ತಮ್ಮ ಅವತಾರ ಕಾರಣ ನಿರೂಪಣ, ಕಲ್ಕ್ಯವತಾರ ಪರ್ಯಂತವಾಗಿ ಅನೇಕ ಗೊಂದಲದ ವಿಷಯಗಳ ನಿರ್ಣಯಗಳನ್ನು ಮಾಡಿದ್ದಾರೆ. ಲಕ್ಷ ಶ್ಲೋಕದ ಮಹಾಭಾರತ, ನಾಲ್ಕು ಲಕ್ಷ ಶ್ಲೋಕದ ಪುರಾಣದ ಮತ್ತು ಸಮಗ್ರ ಶಾಸ್ತ್ರಗಳ ನಿರ್ಣಯಗಳನ್ನು ಒಳಗೊಂಡಿರುವ, ಚತುರ್ಮುಖೇತರರಿಗೆ ಅಸಾಧ್ಯ ವಾದ, ಅನನ್ಯಾದೃಶವಾದ, ವಾಯುದೇವರ ಪರಮಪ್ರಸಾದ ಈ ಗ್ರಂಥರತ್ನ

## ಮಹಾಭಾರತತಾತ್ಪರ್ಯನಿರ್ಣಯದ ಆವಶ್ಯಕತೆ

ಈ ಗ್ರಂಥವನ್ನು ಬರೆಯಲು ಕೆಲವು ಕಾರಣಗಳನ್ನು ಶ್ರೀಮದಾಚಾರ್ಯರು ಹೇಳುತ್ತಾರೆ .

ಕ್ವಚಿದ್ ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ ।
ಕುರ್ಯು: ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ ಕ್ವಚಿದನ್ಯಥಾ ॥(ತಾ.ನಿ.2ಅ.3ಶ್ಲೋ)

ಸದಾಗಮ ಸತ್‌ಸಿದ್ಧಾಂತವನ್ನು ದ್ವೇಷಮಾಡುವ ಜನ ಅನಾದಿಕಾಲದಿಂದಲೂ ಇದ್ದಾರೆ. ಇಂದಿಗೆ ಹುಟ್ಟಿದವರಲ್ಲ, ನಾಳೆಗೆ ಸಾಯುವವರಲ್ಲ. ಸತ್ ಸಿದ್ಧಾಂತದಂತೆ ಅವರ ಸಿದ್ಧಾಂತವೂ ಪ್ರವಾಹತ: ನಿತ್ಯವಾಗಿದೆ . ಎಷ್ಟು ತಿಳಿಸಿದರು ಅವರಿಗೆ ಸರಿಯಾದ ತತ್ವ ಮನಸ್ಸಿಗೆ ಹಿಡಿಸುವದಿಲ್ಲ. ಸಾಕ್ಷಿಗೆ ಒಪ್ಪಿಗೆಯಾಗುವದಿಲ್ಲ. ದುರಾಗ್ರಹದ ಪರಾಕಾಷ್ಠತೆ ಅವರ ಸ್ವರೂಪ. ಅನಾದಿಕಾಲದಿಂದಲೂ ತಾವು ಹೇಳುತ್ತಾ ಬಂದಿರುವ ಸಿದ್ಧಾಂತದ ಸಂಸ್ಕಾರದ ಜೊತೆಗೆ ನಂಟು . ಶುದ್ಧತತ್ವಜ್ಞಾನಿಗಳು ಸಿಗದೇ ಇದ್ದದ್ದರಿಂದ, ಜನರೂ ಕೂಡ ತಮ್ಮ ಅಲ್ಪಮತಿಯಿಂದ ಇಂಥ ಜನರು ಹೇಳಿದ ಸಿದ್ಧಾಂತವನ್ನು ಒಪ್ಪುತ್ತಾರೆ.

### 1.ಕ್ವಚಿತ್ ಗ್ರಂಥಾನ್ ಪ್ರಕ್ಷಿಪಂತಿ

ಸತ್ಸಿದ್ಧಾಂತದ ಬಗೆಗಿನ ಭಿನ್ನಾಭಿಪ್ರಾಯದ ಪರಿಣಾಮ ಶುದ್ಧ ತತ್ವಜ್ಞಾನಕ್ಕಾಗಿ ರಚಿತವಾದ ಮಹಾಭಾರತದ ಮೇಲೆ ಆಗದೇ ಇಲ್ಲ. ಪರಿಪೂರ್ಣ ಪರಿಮಾಣದಲ್ಲಿ ಆಗಿದೆ . ಗ್ರಂಥದ ಬಹುಭಾಗ ಕಲುಷಿತವಾಗಿದೆ. ಎಷ್ಟೋ ಭಾಗಗಳಲ್ಲಿ ತಮಗೆ ಬೇಕಾದ ವಿಷಯಗಳನ್ನು ಸೇರಿಸಿ ಬಿಡುತ್ತಾರೆ. ತಮ್ಮ ಸಿದ್ಧಾಂತವನ್ನು ಪ್ರಚಾರಮಾಡುವ ಉದ್ದೇಶ. ಕೆಲವೊಮ್ಮೆ ತಮ್ಮ ಕಲ್ಪನೆಯನ್ನು ಮೂಲದಲ್ಲಿ ಸೇರಿಸುವ ಹಂಬಲ.

ಉದಾ- ಆದಿಪರ್ವದಲ್ಲಿ ಬರುವ ಕಥೆ. ಕರ್ಣ ದ್ರೌಪದಿ ಸ್ವಯಂವರದಲ್ಲಿ ಧನುಸ್ಸನ್ನು ಎತ್ತುತ್ತಾನೆ . ಆದರೆ ಅವನಿಗೆ ಅದರ ಹಗ್ಗವನ್ನು ಕಟ್ಟಲು ಆಗುವದಿಲ್ಲ. ಆದರೆ ಮಧ್ಯದಲ್ಲಿ ಸೇರಿಸಿದ ಕಥೆ ಹೀಗಿದೆ. ಧನುಸ್ಸನ್ನು ಎತ್ತಿ ಹಗ್ಗ ಕಟ್ಟಿ ಬಾಣ ಬಿಡುವಾಗ ದ್ರೌಪದಿಯ ಮಾತು

ದೃಷ್ಟ್ವಾ ತು ತಂ ದ್ರೌಪದೀ ವಾಕ್ಯಮುಚ್ಚೈರ್ಜಗಾದ ನಾಹಂ ವರಯಾಮಿ ಸೂತಪುತ್ರಮ್ ।
ಸಾಮರ್ಷಹಾಸಂ ಪ್ರಸಮೀಕ್ಷ್ಯ ಸೂರ್ಯಂ ತತ್ಯಾಜ ಕರ್ಣ: ಸ್ಫುರಿತಂ ಧನುಸ್ತತ್ ॥
(ಉತ್ತರದಪಾಠ. ಆದಿ.186-23)

''ಬಾಣ ಬಿಡಲು ಸಿದ್ಧನಾದ ಕರ್ಣನನ್ನು ನೋಡಿ ದ್ರೌಪದಿ ಎತ್ತರದ ಧ್ವನಿಯಿಂದ ನಾನು ಸೂತಪುತ್ರನನ್ನು ಮದುವೆಯಾಗುವದಿಲ್ಲ ಎಂದು ಹೇಳಿದಳು'' ಇದು ಪ್ರಕ್ಷಿಪ್ತ ಯಾಕೆಂದರೆ ಇದೇ ಅಧ್ಯಾಯದಲ್ಲಿ ಹಾಗು ಮುಂದಿನ ಅಧ್ಯಾಯಗಳಲ್ಲಿ ಹೀಗಿದೆ -

ತತೋ ವೈಕರ್ತನ: ಕರ್ಣೋ ವೃಷಾ ವೈ ಸೂತನಂದನ: ।
ಧನುರಭ್ಯಾಶಮಾಗತ್ಯ ತೋಲಯಾಮಾಸ ತದ್ಧನು: ॥
ತಂ ಚಾಪ್ಯಾರೋಪ್ಯಮಾಣಂ ತದ್ ರೋಮಮಾತ್ರೇ ಅಭ್ಯತಾಡಯತ್ ॥(ಆದಿ. 202-34)

''ಕರ್ಣ ಧನುಸ್ಸಿನ ಸಮೀಪಕ್ಕೆ ಬಂದು ಧನುಸ್ಸನ್ನು ಎತ್ತಿ ಹಗ್ಗ ಕಟ್ಟುವಾಗ ರೋಮಮಾತ್ರದಷ್ಟು ಜಾಗ ಉಳಿಯಿತು. ಶಕ್ತಿ ಸಾಲಲಿಲ್ಲ ಅವನಿಗೆ ತಿರುಗಿ ಹೊಡೆಯಿತು''

ಯತ್ ಕರ್ಣಶಲ್ಯಪ್ರಮುಖೈ: ಕ್ಷತ್ರಿಯೈರ್ಲೋಕವಿಶ್ರುತೈ: ।
ನಾನತಂ ಬಲವದ್ಭಿರ್ಹಿ ಧನುರ್ವೇದಪರಾಯಣೈ: ॥ (ದಾಕ್ಷಿಣಾತ್ಯಪಾಠ.203-4, ಉ.ಪಾಠ.187.4)

ಯಾವ ಧನುಸ್ಸಿನ ಹಗ್ಗವನ್ನು ಕರ್ಣ ಶಲ್ಯ ಮುಂತಾದ ಕ್ಷತ್ರಿಯರು ಕಟ್ಟಲಿಲ್ಲವೋ ಅದನ್ನು ಇವರೇನು ಕಟ್ಟುತ್ತಾರೆ ಎಂದು ಬ್ರಾಹ್ಮಣರು ಭೀಮಾರ್ಜುನರು ಎದ್ದು ನಿಂತಾಗ ಹೇಳಿದ ಮಾತು.

ಯತ್ ಪಾರ್ಥಿವೈ: ರುಕ್ಮಸುನೀಥವಕ್ರೈ: ರಾಧೇಯದುರ್ಯೋಧನಶಲ್ಯಸಾಲ್ವೈ: ।
ತದಾ ಧನುರ್ವೇದವರೈರ್ನೃಸಿಂಹೈ: ಕೃತಂ ನ ಸಜ್ಯಂ ಮಹತೋಽಪಿ ಯತ್ನಾತ್ ॥

(ದಾಕ್ಷಿಣಾತ್ಯಪಾಠ.203-19,ಉ.ಪಾಠ.187.19)

ಯಾವ ಧನುಸ್ಸಿನ ಹಗ್ಗ ರುಕ್ಮ ಸುನೀಥ, ವಕ್ರ, ರಾಧೇಯ (ಕರ್ಣ), ದುರ್ಯೋಧನ, ಶಲ್ಯ, ಶಾಲ್ವರುಗಳಿಂದ ಬಹಳ ಪ್ರಯತ್ನಮಾಡಿದರು ಕಟ್ಟಲು ಅಸಾಧ್ಯವಾಗಿತ್ತೋ ಅದನ್ನು ಅರ್ಜುನ ಕಟ್ಟಿದ ಎಂದಿದ್ದಾರೆ. ಇದರಿಂದ ಕರ್ಣನಿಗೆ ಧನುಸ್ಸಿನ ಹಗ್ಗ ಕಟ್ಟಲುಸಾಧ್ಯವಾಗಲಿಲ್ಲ ಎಂದು ಹೇಳುವ ಮುಂದಿನ ಕಥೆಗೆ ವಿರುದ್ಧವಾದ ಮೊದಲಿನ ಕಥೆ ಪ್ರಕ್ಷಿಪ್ತ ಎಂದು ಸಿದ್ಧವಾಗುತ್ತದೆ.

2.ಕ್ವಚಿದಂತರಿತಾಃ

ಇನ್ನು ಕೆಲವು ಭಾಗಗಳನ್ನು ತೆಗೆದು ಬಿಡುತ್ತಾರೆ. ಉದಾ 1.

ನಾರಾಯಣಂ ಸುರಗುರುಂ ಜಗದೇಕನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥

ಎಂಬ ಶ್ಲೋಕ ಮಹಾಭಾರತದ ಆದಿಯಲ್ಲಿ ವೇದವ್ಯಾಸರು ಮಾಡಿದ ಮಂಗಳಾಚರಣ ಎಂದು ಶ್ರೀಮದಾಚಾರ್ಯರು ಉದಾಹರಿಸಿ ವ್ಯಾಖ್ಯಾನ ಮಾಡುತ್ತಾರೆ. ಈ ಶ್ಲೋಕ ಅತ್ಯಂತ ಪ್ರಸಿದ್ಧವಾದುದ್ದು. ಆದರೆ ಉಪಲಬ್ಧ ಪುಸ್ತಕಗಳಲ್ಲಿ ಈ ಶ್ಲೋಕ ಕಾಣುವದಿಲ್ಲ . ಶ್ರೀವಾದಿರಾಜ ತೀರ್ಥ ಶ್ರೀಪಾದಂಗಳವರು ಈ ಪದ್ಯದ ಬಗ್ಗೆ ಬರೆಯುತ್ತಾ "ಕೇರಳದೇಶಸ್ಥಪುಸ್ತಕೇಷು ಅದ್ಯಾಪಿ ದೃಶ್ಯತೇ"ಎಂದು ಅನೇಕ ದೇಶಗಳಲ್ಲಿಯ ಪುಸ್ತಕಗಳಲ್ಲಿ ಮೇಲಿನ ಈ ಶ್ಲೋಕವನ್ನು ಹುಡುಕಿ ಕೇರಳದೇಶದ ಮಹಾಭಾರತದ ಪ್ರತಿಯಲ್ಲಿ ಈ ಶ್ಲೋಕ ಉಪಲಬ್ಧವಿರುವದಾಗಿ ಬರೆಯುತ್ತಾರೆ. ಉದಾ 2.

ಅಶ್ವಮೇಧ: ಕ್ರತು: ಶ್ರೇಷ್ಠ ಜ್ಯೋತಿಶ್ರೇಷ್ಠೋ ದಿವಾಕರ: ।
ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತ: ॥

ಈ ವಾಕ್ಯವು ಪ್ರಧಾನವಾಗಿ ವಾಯುದೇವರಿಗೆ ಸಕಲ ದೇವತೋತ್ತಮತ್ವವನ್ನು ಪ್ರತಿಪಾದಿಸಲು ಹೊರಟಿದ್ದು . ಈ ವಾಕ್ಯವು ದಾಕ್ಷಿಣಾತ್ಯಪಾಠದಲ್ಲಿ ಉಪಲಬ್ಧವಿದೆ . ಆದರೆ ಔತ್ತರೇಯ ಪಾಠದಲ್ಲಿ ಇದು ಅಂತರಿತವಾಗಿದೆ. ಅಲ್ಲಿ ನೋಡಲು ಸಿಗುವದಿಲ್ಲ ಆದರೆ ಶ್ರೀಮದಾಚಾರ್ಯರು ಮಹಾಭಾರತದ ವಾಕ್ಯವೆಂದು ಉದಾಹರಿಸುತ್ತಾರೆ ಮತ್ತು ಭೀಮಸೇನದೇವರ ಅವತಾರ ಪ್ರಸಂಗದಲ್ಲಿ ಇದನ್ನು ವ್ಯಾಖ್ಯಾನಿಸುತ್ತಾರೆ ಕೂಡ.

3.ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ

ಪಾಠವನ್ನು ವ್ಯತ್ಯಾಸ ಮಾಡಿರುವದೂ ಉಂಟು.

ಉದಾ - ವಿರಾಟಪರ್ವದಲ್ಲಿಯ ದುರ್ಯೋಧನನ ಮಾತು . ಇದು ಈಗ ಹೀಗೆ ಉಪಲಬ್ಧವಿದೆ .

ಬಲಭದ್ರಶ್ಚ ಭೀಮಶ್ಚ ಮದ್ರರಾಜಶ್ಚ ವೀರ್ಯವಾನ್ ।

ಆದರೆ ಶ್ರೀಮದಾಚಾರ್ಯರು ಹೇಳುವ ಮತ್ತು ಸಮರ್ಥಿಸುವ ಪಾಠ ಹೀಗಿದೆ -

ಭೀಮಶ್ಚ ಬಲಭದ್ರಶ್ಚ ಮದ್ರರಾಜಶ್ಚ ವೀರ್ಯವಾನ್ ।

ಮಹಾಭಾರತದಲ್ಲಿ ವ್ಯತ್ಯಾಸವಾಗಿದ್ದು ಎರಡುರೀತಿಯಾಗಿ ಒಂದು ಅಂತರಂಗ ಮತ್ತೊಂದು ಬಹಿರಂಗ . ಅಂತರಂಗದಲ್ಲಿ ಎಂದರೆ ಗ್ರಂಥದ ಒಳಗಡೆ ಆಗುವ ವ್ಯತ್ಯಾಸ . ಅದರ ಉದಾಹರಣೆಯನ್ನು ನಾವು ಮೇಲೆ ನೋಡಿದ್ದೇವೆ . ಇನ್ನು ಬಹಿರಂಗದಲ್ಲಿ ವ್ಯತ್ಯಾಸ ಎಂದರೆ ಮಹಾಭಾರತದ ಕಥೆಯನ್ನು ಆಧಾರವಾಗಿಟ್ಟುಕೊಂಡು ಕವಿಗಳು ಮಾಡಿದ ಕೃತಿಗಳಲ್ಲಿ ಆದ ವ್ಯತ್ಯಾಸ . ಇದರಲ್ಲೂ ಸಂಸ್ಕೃತಕವಿಗಳಿಂದ ಹಾಗು ಪ್ರಾಕೃತಕವಿಗಳಿಂದ ಆದದ್ದು .

ಸಂಸ್ಕೃತಕವಿಗಳಿಗಾಗಲಿ , ಇತರ ಕವಿಗಳಿಗಾಗಲಿ ಮಹಾಭಾರತ, ರಾಮಾಯಣ, ಪುರಾಣಗಳು ಕೃತಿರಚನೆಗೆ ಉಪಜೀವ್ಯವಾಗಿದೆ. ಇವುಗಳನ್ನು ಆಧರಿಸಿ ಜೊತೆಗೆ ತಮ್ಮ ಚಾತುರ್ಯದ ರಂಗಿನಿಂದ ಜಗತ್ತಿನಲ್ಲಿ ಬೆಳಗಿದ್ದಾರೆ . ಇವುಗಳಿಂದ ಪ್ರಭಾವಿತರಾಗದೇ ಇರುವವರು ಯಾರೂ ಇಲ್ಲ . ಭಾಸ , ಕಾಳಿದಾಸ, ಭಾರವಿ, ಮಾಘ ಎಲ್ಲರೂ ಭಾರತಕಾಮಧೇನುವಿನ ಕರುಗಳೇ. ಮೂಲದ ಕಥೆಗಳನ್ನು ಆಧರಿಸಿ

ರಚಿಸಿದ ಕೃತಿಗಳಲ್ಲಿ ತಮ್ಮ ಕಲ್ಪನೆಯನ್ನು ಸೇರಿಸಿ ಕಥೆಗಳ ಸರಮಾಲೆಯನ್ನು ಸೃಷ್ಟಿಸಿದ್ದಾರೆ. ಭಾರವಿ ತನ್ನ ಕಿರಾತಾರ್ಜುನೀಯದಲ್ಲಿ ಆಯ್ದ ಕಥೆ ಸಣ್ಣದಾದರೂ ಅನೇಕ ಕಡೆ ವ್ಯತ್ಯಾಸ ಮಾಡಿದ್ದಾನೆ. ತನ್ನ ರುಚಿಯಂತೆ ಕಥೆಯನ್ನು ಹೆಣೆದಿದ್ದಾನೆ. ಅರ್ಜುನನ್ನು ನಾಯಕನನ್ನಾಗಿ ಕಲ್ಪಿಸಿ, ಧರ್ಮರಾಜನನ್ನು ಭೀಮಸೇನನಿಗಿಂತ ನೀತಿಕೋವಿದನನ್ನಾಗಿ ಕಲ್ಪಿಸಿ, ವೇದವ್ಯಾಸರನ್ನು ಋಷಿ ಎಂದು ಹೀಗೆ ಅನೇಕ ಮಾರ್ಪಾಡುಗಳಿಂದ ಕೂಡಿದ್ದಾಗಿದೆ ಆ ಕಾವ್ಯ . ಮಾಘ ತನ್ನ ಶಿಶುಪಾಲವಧದಲ್ಲಿ ಉದ್ಧವನನ್ನು ಬಲರಾಮನಿಗಿಂತ ನೀತಿಕೋವಿದನಂತೆ ಚಿತ್ರಿಸಿದ್ದೆ ಅಲ್ಲದೆ, ಇನ್ನೂ ಅನೇಕ ವ್ಯತ್ಯಾಸಮಾಡಿ ಬರೆದಿದ್ದಾನೆ . ಕ್ಷೇಮೇಂದ್ರ ಭಾರತ ಕಥಾಮಂಜರಿಯನ್ನು ಬರೆದರೂ ನಿರ್ಣಯಗಳನ್ನು ಮಾಡಲೇ ಇಲ್ಲ. ಭಟ್ಟ ನಾರಾಯಣ ವೇಣೀಸಂಹಾರವಲ್ಲಿ ಭೀಮಸೇನನ್ನು ಅತ್ಯಂತ ಯುದ್ಧಪ್ರಿಯನನ್ನಾಗಿ ಚಿತ್ರಿಸಿದ್ದಾನೆ. ಉದ್ದೇಶಪೂರ್ವಕವಾಗಿ ಭೀಮನಿಂದ ಕೃಷ್ಣನ ವಿರುದ್ಧವಾಗಿ ಮಾತುಗಳನ್ನು ಹೇಳಿಸುವುದು ಮುಂತಾದ ಬದಲಾವಣೆಗಳನ್ನು ಮಾಡಿದ್ದಾನೆ. ಅಷ್ಟೇ ಅಲ್ಲದೆ ಪ್ರಾಕೃತಕವಿಗಳೂ ಕೂಡ ವ್ಯತ್ಯಾಸ ಮಾಡುತ್ತಾರೆ. ಪಂಪ,ರನ್ನರು ಜೈನರು. ತಾವು ನಂಬಿದ ಮತವನ್ನು ಬೆಳೆಸಲು ಮಹಾಭಾರತವನ್ನೇ ಹಿಡಿದಿದ್ದಾರೆ. ಗದಾಯುದ್ಧದಲ್ಲಿ ರನ್ನ ದುರ್ಯೋಧನನ್ನು ಅತ್ಯಂತ ಧೀರೋದಾತ್ತನಾಯಕನನ್ನಾಗಿ ಮಾಡಿ, ಅತ್ಯಂತ ಶುದ್ಧವ್ಯಕ್ತಿಯನ್ನಾಗಿಸಿದ್ದಾನೆ. ಅಶ್ವತ್ಥಾಮಾಚಾರ್ಯರಿಗೆ ಬುದ್ಧಿಹೇಳುವ ವ್ಯಕ್ತಿತ್ವ ಉಳ್ಳವನನ್ನಾಗಿ ವರ್ಣಿಸಿದ್ದಾನೆ. ಪಂಪನೂ ಅನೇಕ ಕಡೆಗಳಲ್ಲಿ ವ್ಯತ್ಯಾಸ ಮಾಡಿದ್ದಾನೆ. ದೇವರಲ್ಲಿಯ ಗುಣಗಳನ್ನು ತನ್ನ ಆಶ್ರಯದಾತನಾದ ಅರಿಕೇಸರಿಯಲ್ಲಿ ಸ್ತುತಿಸಿದ್ದಾನೆ. ಅರ್ಜುನನನ್ನು ಸರ್ವೋತ್ಕೃಷ್ಟನಾಯಕನನ್ನಾಗಿ, ಸುಭದ್ರೆಯನ್ನು ನಾಯಕಿಯನ್ನಾಗಿ ಚಿತ್ರಿಸಿದ್ದಾನೆ. ದ್ರೌಪದಿಯ ಪಂಚಪತಿತ್ವ ರಹಸ್ಯ ಹೇಳಲಾಗದೆ, ರಾಜಸೂಯಯಾಗದ ಸಂದರ್ಭದಲ್ಲಿ ತನ್ನ ಜೈನಸಿದ್ಧಾಂತವನ್ನು ಎತ್ತಿ ಹಿಡಿದಿದ್ದಾನೆ. ಯುದ್ಧದ ನಂತರ ಅರ್ಜುನನಿಗೆ ಪಟ್ಟಾಭಿಷೇಕಮಾಡಿಸಿದ್ದಾನೆ. ಹೀಗೆ ಆ ಆ ಪ್ರಾಂತದ ಕವಿಗಳು ಮಾಡಿದ ಕೃತಿಗಳಿಂದಾಗಿ ಸಾವಿರಾರು ವರ್ಷಗಳಿಂದ ಬೆಳೆದು ಬಂದ ಮೂಲಕಥೆ ಗಳಲ್ಲಿ ಮಾರ್ಪಾಡುಗಳಾಗಿದೆ. ಇದನ್ನು ಜನರು ಯಾವ ಉದ್ದೇಶದಿಂದಲೇ ಆಗಲಿ, ಆಗಿನಿಂದಲೂ ಓದುತ್ತಾ ಬಂದಿದ್ದಾರೆ. ಇದರಿಂದ ಮಹಾಭಾರತದ ಉದ್ದೇಶ ಸಿದ್ಧವಾಗದೇ, ಕೇವಲ ಯಾವುದೋ ಒಂದು ರಾಜಮನೆತನದ ರಾಜ್ಯವಿಷಯಕವಾದ ಕೌಟುಂಬಿಕ ಕಲಹದ ಕಥೆಯಂತೆ ಕಾಣುತ್ತಿದೆ ಮಹಾಭಾಗತ. ಮಹಾಭಾರತ ಅಧ್ಯಯನಮಾಡುವಾಗ ನುಸುಳುವ ಸಾವಿರಾರು ಪ್ರಶ್ನೆಗಳಿಗೆ ಉತ್ತರರೂಪವಾಗಿ, ಇತಿಹಾಸ ಪುರಾಣಪ್ರಪಂಚದ ಸಮಸ್ಯೆಗಳಿಗೆ ಪರಿಹಾರರೂಪವಾಗಿ ಗ್ರಂಥದ ಆವಶ್ಯಕತೆ ಇದ್ದದ್ದಕ್ಕಾಗಿ ಮಹಾಭಾರತತಾತ್ಪರ್ಯನಿರ್ಣಯ ಅವತಾರ ಮಾಡಿತು.

4. ಪ್ರಮಾದಾತ್ ಕ್ವಚಿದನ್ಯಥಾ

ಕೆಲವು ಭಾಗಗಳು ಲಿಪಿಕಾರರ ಪ್ರಮಾದದಿಂದ,ಪಾಠಮಾಡುವವರ ಪ್ರಮಾದದಿಂದ ಲುಪ್ತವಾಗಿದೆ, ವ್ಯತ್ಯಾಸವಾಗಿದೆ. ಹೀಗೆ ಬಹುಭಾಗ ಗ್ರಂಥ ಹಾಳಾಗಿರುವರಿಂದ ಪ್ರಾಮಾಣಿಕವಾಗಿ ಅಧ್ಯಯನ ಮಾಡಿ ನಿರ್ಣಯಮಾಡಿಕೊಳ್ಳಲು ತತ್ವಜ್ಞಾನಮಾಡಿಕೊಳ್ಳಲು ಸಾಧ್ಯವಿಲ್ಲ

5. ಪ್ರತಿಯೊಂದು ಗ್ರಂಥವನ್ನು ಗ್ರಂಥಕಾರರು ಒಂದು ವಿಶಿಷ್ಟ ಶೈಲಿಯಲ್ಲಿ ಬರೆಯುತ್ತಾರೆ. ಆದರೆ ವೇದಗಳು, ಮಹಾಭಾರತ ಪುರಾಣಳು ಲೋಕವಿಲಕ್ಷಣಶೈಲಿಯಲ್ಲಿ ಇದೆ ಎನ್ನುತ್ತಾರೆ ಆಚಾರ್ಯರು . ಮೂರು ಭಾಷೆಗಳು ,ವ್ಯತ್ಯಾಸಾದಿ ಏಳು ಪ್ರಭೇದಗಳು, ನೂರು ರೀತಿಗಳು ಇವುಗಳಿಂದ ಕೂಡಿದೆ. ಅಲ್ಲದೆ ಮಹಾಭಾರತ ಮನ್ವಾದಿ , ಆಸ್ತೀಕಾದಿ ಹಾಗು ಓಪರಿಚರಾದಿ ಎಂಬ ಅರ್ಥ ತ್ರಯಗಳಿಂದ ಕೂಡಿದೆ .

ಗುಹ್ಯಭಾಷಾ, ದರ್ಶನಭಾಷಾ, ಸಮಾಧಿಭಾಷಾ ಎಂಬ ಮೂರು ಭಾಷೆಗಳು . ಇದರ ಅವಾಂತರ ಪ್ರಭೇದ ಮತ್ತೆ ಗುಹ್ಯ ಸಮಾಧಿ , ಗುಹ್ಯದರ್ಶನ, ಗುಹ್ಯಗುಹ್ಯ , ಸಮಾಧಿಗುಹ್ಯ , ಸಮಾಧಿಸಮಾಧಿ, ಸಮಾಧಿದರ್ಶನ, ದರ್ಶನಸಮಾಧಿ, ದರ್ಶನದರ್ಶನ, ದರ್ಶನಗುಹ್ಯ ಎಂಬುದಾಗಿ ಒಂಬತ್ತು . ಮತ್ತೂ ಅವುಗಳಲ್ಲಿ ಪ್ರಭೇದಗಳಿಂದ 27 ಹಾಗು ಅವುಗಳಲ್ಲಿ ಪ್ರಭೇದದಿಂದಾಗಿ 81 ರೀತಿಯಾಗಿದೆ .

ಗುಹ್ಯಭಾಷಾ ಸಾಮಾನ್ಯತ: ನೋಡಿದರೆ ಅರ್ಥಸ್ಫುರಣವಾಗದ ಭಾಷೆ . ಶಾಸ್ತ್ರೀಯವಾಗಿ ಹಾಗು ಲೋಕರೀತ್ಯಾ ವಿರುದ್ಧವಾಗಿ ತೋರುವ ಮಾತುಗಳು . ಮಹಾಭಾರತ ಲೇಖಕನಾದ ಗಣೇಶನೇ ಕ್ಷಣ ತಡೆದು ಬರೆಯುತ್ತಿದ್ದ ಮಾತುಗಳು. ಇವುಗಳ ಸಂಖ್ಯೆ ಅಲ್ಲಿಯೆ ಹೇಳಿದಂತೆ 8800 'ಅಷ್ಟೌ ಶ್ಲೋಕ ಸಹಸ್ರಾಣಿ ಅಷ್ಟೌ ಶ್ಲೋಕ ಶತಾನಿ ಚ' . ಇಂಥ ಕೂಟ ಶ್ಲೋಕಗಳ ಅರ್ಥವನ್ನೇ ಬೇರೆ ಹೇಳಬೇಕು.

ಇನ್ನು ಪಾಶುಪತ, ಸಾಂಖ್ಯ ಮುಂತಾದ ಸಿದ್ಧಾಂತಗಳನ್ನು ಅನುಸರಿಸಿ ಕಥೆಗಳನ್ನು ಹೇಳುತ್ತಾರೆ. ಕಥೆಯ ಕೊನೆಯಲ್ಲಿ ನಿಷೇಧವಿರುತ್ತದೆ . ಬಹು ವೇದವಿರುದ್ಧವಾಗಿಯೂ ಇರುತ್ತದೆ. ಆದರಂತೆ ಮಹಾಭಾರತದ ಆದ್ಯಂತಗಳಿಗೆ ವಿರುದ್ಧವಾಗಿಯೂ ಇರುತ್ತದೆ . ಇದು ದರ್ಶನ ಭಾಷೆಯಲ್ಲಿ ಹೇಳಿದ್ದು . ಇದು ಗ್ರಾಹ್ಯವಲ್ಲ. ವೈದಿಕದರ್ಶನವನ್ನು ಅವಲಂಬಿಸಿ ಹೇಳಿದ ವಿಷಯಗಳನ್ನು ಗ್ರಹಣಮಾಡಬಹುದು. ಅದು ವೇದಾವಿರುದ್ಧವಾಗಿರುತ್ತದೆ.

ಸಮಾಧಿಭಾಷೆಯಲ್ಲಿ ಹೇಳಿದ್ದು ಗ್ರಾಹ್ಯವಾಗಿದೆ. ಅದರಲ್ಲಿ ಹೇಳಿದ್ದು ನಿಜವಾದ ಸಿದ್ಧಾಂತವಾಗಿರುತ್ತದೆ. ಈ ಎಲ್ಲಾ ವಿಷಯಗಳನ್ನು ನಿರ್ಣಯಮಾಡಲು ಈ ಗ್ರಂಥ ಆವಶ್ಯಕವಾಗಿದೆ.

6. ಭಾಗವತಮುಂತಾದವುಗಳಲ್ಲಿ ಪುರುಷವ್ಯತ್ಯಾಸವನ್ನು, ಕಥೆಗಳಲ್ಲಿ ಪೌರ್ವಾಪರ್ಯವನ್ನು, ಸರಿಯಾಗಿ ವಿವೇಕಮಾಡದೇ, ವಿಸ್ತಾರವಾಗಿ ಹೇಳಿದ್ದರ ವಿರುದ್ಧವಾಗಿ ಸಂಕ್ಷೇಪದಲ್ಲಿ, ಸಂಕ್ಷೇಪವಾಗಿ ಹೇಳಿದ್ದರ ವಿರುದ್ಧವಾಗಿ ವಿಸ್ತಾರದಲ್ಲಿ ಹೇಳಿದ್ದಾರೆ. ಮುಂದಾಗುವ ಘಟನೆಗಳನ್ನು ಮುಂದಾಗುವುದು ನಿಶ್ಚಿತವೆಂದು ಬಗೆದು ಹಿಂದೆ ನಡೆದು ಹೋದಂತೆ, ಪಾಂಡವರ- ಕೃಷ್ಣನ-ರಾಮದೇವರ ಕಥೆಗಳನ್ನು - ಬ್ರಹ್ಮಾದಿಗಳ ತಾರತಮ್ಯವನ್ನು ವ್ಯತ್ಯಾಸ ಮಾಡಿ ನಿರೂಪಿಸುತ್ತಾರೆ. ಗ್ರಹ-ನಕ್ಷತ್ರ ಮುಂತಾದವುಗಳ ಪರಿಮಾಣ-ಕ್ರಮಗಳ ವ್ಯತ್ಯಾಸವನ್ನು ದುಷ್ಟರ ಮೋಹಕ್ಕಾಗಿ ಮತ್ತು ಹೆಚ್ಚಿಗೆ ಪುಣ್ಯಗಳಿಸಿದ ಸಜ್ಜನರಿಗೆ ಮೋಸಮಾಡಿ ಅಧಿಕಪುಣ್ಯ ಹ್ರಾಸ ಮಾಡುವದಕ್ಕಾಗಿ ಹೇಳುತ್ತಾರೆ. ಆದರೆ ಮಹಾಭಾರತ ಗ್ರಂಥದಲ್ಲಿ ಎಲ್ಲಿಯೂ ಮೋಸಮಾಡಿಲ್ಲ, ಮೋಹಕ್ಕಾಗಿ ಬರೆದಿಲ್ಲ, ಪರಾಪರತತ್ತ್ವಗಳನ್ನು ಸಪ್ರಮಾಣವಾಗಿ ನಿರೂಪಣೆ ಮಾಡುವದಕ್ಕಾಗಿ ಕೇವಲ ಶುದ್ಧತತ್ತ್ವಜ್ಞಾನಕ್ಕಾಗಿಯೇ ಹೊರಟ ಗ್ರಂಥವಿದು. ಇಲ್ಲಿ ಏನೇ ವ್ಯತ್ಯಾಸ ಕಂಡರೂ ಅದು ದರ್ಶನಭಾಷಾ, ಗುಹ್ಯಭಾಷಾಗಳಲ್ಲಿ ಹೇಳಿದ್ದು ಅಥವಾ ಭಾಷಾಪ್ರಭೇದಗಳಿಂದಲೋ ರೀತಿಶತಕವನ್ನು ಅನುಸರಿಸಿ ಹೇಳಿದ್ದೋ ಆಗಿದೆ. ಅದನ್ನು ಜನರು ಸರಿಯಾದ ಗುರುಪರಂಪರೆ ಇಲ್ಲದ ಕಾರಣದಿಂದಾಗಿ ಅಥವಾ ಪ್ರಮಾದದಿಂದಲೋ ಅನ್ಯಥಾ ತಿಳಿದು ಕೊಂಡಿದ್ದಾರೆ. ಈ ಎಲ್ಲಾ ಪ್ರಮೇಯಗಳನ್ನು ನಿರ್ಣಯ ಮಾಡುವದಕ್ಕಾಗಿ ಮಹಾಭಾರತತಾತ್ಪರ್ಯನಿರ್ಣಯ ಆವಶ್ಯಕವಾಗಿದೆ.

ಆ ನಿರ್ಣಯಗಳನ್ನು ಯುಕ್ತಿಗಳಿಂದ, ಬುದ್ಧಿಬಲದಿಂದ, ಪರಮಾತ್ಮನ ಪ್ರಸಾದದಿಂದ ಮಾಡಿದ್ದೇನೆ. ಬಹುಕಲ್ಪಾನುಸಾರಿಯಾಗಿ ಇಲ್ಲಿ ಕಥೆಗಳನ್ನು ಹೇಳಿ ನಿರ್ಣಯ ಮಾಡಿದ್ದೇನೆ. ಆದ್ದರಿಂದ ಯಾವುದೋ ಒಂದು ಕಲ್ಪದ ರೀತಿಯಿಂದ ಇಲ್ಲಿ ಹೇಳಿದ ನಿರ್ಣಯಗಳಿಗೆ ವಿರೋಧವನ್ನು ಆಶಂಕಿಸಬೇಡಿ ಎಂದು ಹೇಳುತ್ತಾರೆ.

ಯುಕ್ತ್ಯಾ ಬುದ್ಧಿಬಲಾಚ್ಚೈವ ವಿಷ್ಣೋರೇವ ಪ್ರಸಾದತಃ ।
ಬಹುಕಲ್ಪಾನುಸಾರೇಣ ಮಯೇಯಂ ಸತ್ಕಥೋದಿತಾ ।
ನೈಕಗ್ರಂಥಾಶ್ರಯಾ ತಸ್ಮಾತ್ ನಾಶಂಕ್ಯಾತ್ರ ವಿರುದ್ಧತಾ ॥

## ಟಿಪ್ಪಣೀಕಾರರ ಪರಿಚಯ

ಮೂಲಗ್ರಂಥದ ಭಾವವನ್ನು ಸರಿಯಾಗಿ ತಿಳಿಯುವದಕ್ಕಾಗಿ ಟೀಕಾಟಿಪ್ಪಣಿಗಳು ಬಹಳ ಉತ್ತಮವಾದ ಮಾಧ್ಯಮಗಳಾಗಿವೆ. ಹೀಗಿರುವಾಗ ತಾತ್ಪರ್ಯನಿರ್ಣಯದಂತಹ ಅತ್ಯಂತಗಂಭೀರವಾದ ಹಾಗು ಅತಿಸಂಕ್ಷಿಪ್ತವಾದ ಈ ಗ್ರಂಥಕ್ಕೆ ಅನೇಕ ಯತಿವರೇಣ್ಯರು ಹಾಗು ಅನೇಕ ಆಚಾರ್ಯರು ಅದ್ಭುತವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಆಚಾರ್ಯರು ಹೇಳಿದ ಪ್ರಮೇಯಗಳನ್ನು ಸಮರ್ಥಿಸುವಲ್ಲಿ ಜೀವನದ ಧನ್ಯತೆಯನ್ನು ಕಾಣುತ್ತಾರೆ. ಆಚಾರ್ಯರ ಚ-ತು ಮೊದಲಾದಶಬ್ದಗಳಿಗೂ ವ್ಯಾಖ್ಯಾನಿಸಿ ಅವುಗಳಿಂದ ಹೊಸದಾದ ಕಥೆಗಳನ್ನು ಮತ್ತು ಪ್ರಮೇಯಗಳನ್ನು ತಿಳಿಸುತ್ತಾರೆ. ಈ ಎಲ್ಲ ವ್ಯಾಖ್ಯಾನಗಳು ಮೂಲದ ಅಭಿಪ್ರಾಯವನ್ನು ತಿಳಿಸುವಲ್ಲಿ ಅತ್ಯಂತ ಉಪಯುಕ್ತವಾಗಿವೆ. ಗ್ರಂಥಾಂತರಗಳಿಂದ ಬರುವ ವಿರೋಧ ಹಾಗೂ ಈ ಗ್ರಂಥದ ಪೂರ್ವಾಪರ ಅಧ್ಯಾಯಗಳಲ್ಲಿ ಮೇಲೆ ತೋರುವ ಅನೇಕ ವಿರೋಧಾಭಾಸಗಳನ್ನು ಪರಿಹರಿಸುವದಕ್ಕೆ ಈ ವ್ಯಾಖ್ಯಾನಗಳೇ ಶರಣು. ಈ ವ್ಯಾಖ್ಯಾನಗಳಿಲ್ಲದಿದ್ದರೆ ಮೂಲದ ನಿಜವಾದ ಆಳ ಹಾಗು ವಿಸ್ತಾರಗಳು ನಮ್ಮ ಅರಿವಿಗೆ ನಿಲುಕುವದು ಅಸಾಧ್ಯ. ಈ ಕಾರಣಕ್ಕಾಗಿ ನಾವೆಲ್ಲರೂ ಈ ಮಹಾನುಭಾವರ ಮಹೋಪಕಾರವನ್ನು ನಿತ್ಯವೂ ಸ್ಮರಿಸಿ ಅವರಿಗೆ ಅನಂತಪ್ರಣಾಮಗಳನ್ನು ಸಲ್ಲಿಸಬೇಕು.

### 1. ಶ್ರೀವ್ಯಾಸತೀರ್ಥರು

ಇವರು ಶ್ರೀಮಟ್ಟೀಕಾಕೃತ್ಪಾದರೆಂದೇ ಪ್ರಸಿದ್ಧರಾದ ಶ್ರೀಜಯತೀರ್ಥರ ಶಿಷ್ಯರು. 14ನೇ ಶತಮಾನದವರು. ಈ ಗ್ರಂಥಕ್ಕೆ ಉಪಲಬ್ಧವಿರುವ ಮೂವತ್ತು ಟಿಪ್ಪಣಿಗಳಲ್ಲಿ ಇದು ಪ್ರಥಮ ಟಿಪ್ಪಣಿ. ಈ ಟಿಪ್ಪಣಿಯ ಹೆಸರು ಭಾರತಭಾವಪಂಚಿಕಾ. ತೈತ್ತಿರೀಯಭಾಷ್ಯಟೀಕಾದಲ್ಲಿ ವ್ಯಾಸತೀರ್ಥರು - ಸಮಗ್ರಸೂಕ್ತವ್ಯಾಖ್ಯಾನಂ ತು ಭಾರತಭಾವಪಂಚಿಕಾಯಾಂ ದ್ರಷ್ಟವ್ಯಮ್- ಎಂದು ಹೇಳಿದ್ದಾರೆ. ಬಳಿತ್ಥಾಸೂಕ್ತದ ವ್ಯಾಖ್ಯಾನವನ್ನು ಅಲ್ಲಿ ಮಾಡದೆ ಭಾರತಭಾವಪಂಚಿಕಾದಲ್ಲಿ ಮಾಡಿದ್ದೇವೆ ಎಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಅಂತ್ಯದಲ್ಲಿ ಹೀಗೆ ಹೇಳಿದ್ದಾರೆ.

ಇತೀರಿತಾಂ ಭಾರತಭಾವಪಂಚಿಕಾಂ ಮನಸ್ಯರಾಲೇ ನಿದಧೀತ ಮಾಧವಃ ।
ಸಂತೋಽತ್ರ ನ ಸ್ಯುರ್ವಿಪರೀತದೃಷ್ಟಯೋ ಗೃಹ್ಣಂತಿ ಬಾಲಾದಪಿ ಸಾಧುಭಾಷಿತಮ್ ॥

ಬಹು ಅರ್ಥಗರ್ಭಿತವಾದ ಗಂಭೀರವಾದ, ಸಂಕ್ಷಿಪ್ತ ಶಬ್ದಗಳಿಂದ ವ್ಯಾಖ್ಯಾನ ಮಾಡುವದು ಇವರ ಶೈಲಿ. ಹೆಚ್ಚಿನ ಮಾತನ್ನು ಬರೆಯದಿದ್ದರೂ, ಆವಶ್ಯವಿದ್ದಲ್ಲಿ ಮೂಲದ ಅಭಿಪ್ರಾಯವನ್ನು ಕೆಲವೇ ಶಬ್ದಗಳಲ್ಲಿ ವರ್ಣಿಸುತ್ತಾರೆ. ಶ್ರೀವಾದಿರಾಜರು ಹಾಗು ತಾಮ್ರಪರ್ಣೀ ಆಚಾರ್ಯರು ಇವರ ಟಿಪ್ಪಣಿಯನ್ನು ಬಹಳ ವಿಷಯಗಳಲ್ಲಿ ಅನುಸರಿಸುತ್ತಾರೆ. ಅನೇಕ ಕಡೆ ಇವರ ವಾಕ್ಯಗಳನ್ನೇ ಸೇರಿಸಿ ವ್ಯಾಖ್ಯಾನಿಸುತ್ತಾರೆ. ತಾಮ್ರಪರ್ಣೀ ಆಚಾರ್ಯರು ತಮ್ಮ ವ್ಯಾಖ್ಯಾನದ ಆರಂಭದಲ್ಲಿ ಇವರನ್ನು ಹೀಗೆ ಸ್ತುತಿಸಿದ್ದಾರೆ-

ವೇದಾಂತಭಾಷ್ಯನಿಚಯ: ತಥಾ ಭಾರತನಿರ್ಣಯ: ।
ವಿವೃತೋ ಯೇನ ತಂ ವಂದೇ ವ್ಯಾಸತೀರ್ಥಾಭಿಧಂ ಮುನಿಮ್ ॥

ಇವರು ಈ ಟಿಪ್ಪಣಿಯಲ್ಲದೆ ಎಂಟು ಉಪನಿಷತ್ತುಗಳ ಭಾಷ್ಯಕ್ಕೆ ಟೀಕೆಯನ್ನು ಬರೆದಿದ್ದಾರೆ. ತಂತ್ರಸಾರಕ್ಕೂ ವ್ಯಾಖ್ಯಾನ ಮಾಡಿದ್ದಾರೆ ಎಂದು ಪ್ರತೀತಿ ಇದೆ. ಶ್ರೀರಘೂತ್ತಮತೀರ್ಥರು ತಮ್ಮ ಬೃಹದಾರಣ್ಯಕ ಭಾವಬೋಧದಲ್ಲಿ ಇವರನ್ನು ಹೀಗೆ ಸ್ತುತಿಸಿದ್ದಾರೆ-

ಯೇನ ವೇದಾಂತಭಾಷ್ಯಾಣಿ ವಿವೃತಾನಿ ಮಹಾತ್ಮನಾ ।
ತಂ ವಂದೇ ವ್ಯಾಸತೀರ್ಥಾಖ್ಯಂ ವೇದಂತಾರ್ಥಪ್ರಸಿದ್ಧಯೇ ॥

ಅಷ್ಟೇ ಅಲ್ಲದೆ ಅಣುಜಯತೀರ್ಥವಿಜಯ ಹಾಗು ಬೃಹತ್ ಜಯತೀರ್ಥವಿಜಯ ಇವರ ಕೃತಿಗಳು. ಅವರೆಡೂ ಈಗ ಮುದ್ರಿತವಾಗಿ ಉಪಲಬ್ಧವಿದೆ.

## 2. ಶ್ರೀವಾದಿರಾಜರು (ಕ್ರಿ.ಶ.1460–ಕ್ರಿ.ಶ.1600)

ಇವರು ಶ್ರೀಮದಾಚಾರ್ಯರ ಪೂರ್ವಾಶ್ರಮದ ತಮ್ಮಂದಿರಾದ ಶ್ರೀವಿಷ್ಣುತೀರ್ಥರಿಂದ ಪ್ರವರ್ತಿತವಾದ ಸೋದೆ ಮಠದಲ್ಲಿ ಬಂದ ಶ್ರೀವಾಗೀಶತೀರ್ಥರ ಶಿಷ್ಯರು. 120ವರ್ಷದ ಪೂರ್ಣಾಯುಷ್ಯದ ಸನ್ಯಾಸಜೀವನ ಇವರದು. ಚಂದ್ರಿಕಾಚಾರ್ಯರೆಂದು ಪ್ರಸಿದ್ಧರಾದ ಶ್ರೀವ್ಯಾಸರಾಯರ ಶಿಷ್ಯರು . ಇವರು ಶ್ರೀವಿಜಯೀಂದ್ರತೀರ್ಥರ ಸಹಾಧ್ಯಾಯಿಗಳು. ಅವರಂತೆ 64 ಕಲೆಗಳಲ್ಲಿ ನುರಿತವರು. ಅಪಾರ ಮಹಿಮೆಯ ಮಹಾತಪೋನಿಧಿಗಳು. ಜ್ಞಾನಮೂರ್ತಿಗಳು. ಇವರ ಮಹಿಮೆಗಳು ನೂರಾರು. ಇವರ ಪರಿಚಯ ಮಾಡಿಸುವುದು ಜಗತ್ತಿಗೆ ಸೂರ್ಯನನ್ನು ಪರಿಚಯಿಸಿದಂತೆ. ಪ್ರತಿಭೆಯ ಮೂರ್ತಿ. ಮಹಾಕುಶಲತೆ ಇವರದು. ಪ್ರತಿಯೊಂದು ವಿಷಯವನ್ನೂ ತಮ್ಮದೇ ಆದ ವಿಶಿಷ್ಟಶೈಲಿಯಿಂದ ನಿರೂಪಿಸುವವರು. ಇವರು ಅನೇಕ ಪ್ರೌಢಗ್ರಂಥಕರ್ತೃಗಳು. ಪ್ರಸಿದ್ಧ ಟಿಪ್ಪಣೀಕಾರರು. ಶ್ರೀಮನ್ನ್ಯಾಯಸುಧಾ ಗುರ್ವರ್ಥದೀಪಿಕಾ, ತತ್ತ್ವಪ್ರಕಾಶಿಕಾ ಗುರ್ವಥದೀಪಿಕಾ, ಉಪನಿಷದ್‌ಭಾಷ್ಯ ಟಿಪ್ಪಣಿ, ಮುಂತಾದ ಟೀಕಾ ಟಿಪ್ಪಣಿಗಳನ್ನು ಮತ್ತು ಯುಕ್ತಿಮಲ್ಲಿಕಾ, ಸರಸಭಾರತೀವಿಲಾಸ, ಮುಂತಾದ ಸ್ವತಂತ್ರ ಪ್ರೌಢ ಗ್ರಂಥಗಳನ್ನು ರಚಿಸಿದ್ದಾರೆ. ಮಹಾಭಾರತ ಲಕ್ಷಾಲಂಕಾರ, ಸನತ್ಸುಜಾತೀಯ ವ್ಯಾಖ್ಯಾನ ಮಾಧ್ವರಲ್ಲೇ ಅಪೂರ್ವಗ್ರಂಥ. ವಿವರಣವ್ರಣದಂಥ ಪರಮತಖಂಡನ ಗ್ರಂಥರತ್ನಗಳು ಈ ಮಹಾನುಭಾವರ ಅನುಗ್ರಹ. ಇವರು ಸರಸ ಕವಿಗಳು ಹೌದು. ಇವರ ಶಾಸ್ತ್ರೀಯಕಾವ್ಯಗ್ರಂಥ ಶ್ರೀರುಕ್ಮಿಣೀಶ ವಿಜಯ . ಸ್ತೋತ್ರಸಾಹಿತ್ಯದಲ್ಲಿ ಇವರನ್ನು ಹಿಡಿಯುವವರೇ ಇಲ್ಲ. ಮಾಧ್ವರಲ್ಲಿ ಇರುವ ಸ್ತೋತ್ರಗಳಲ್ಲಿ ಬಹುಪಾಲು ಸ್ತೋತ್ರಗಳು ಇವರ ಕೃತಿ. ಕನ್ನಡದಲ್ಲಿ ಹಾಗು ತುಳುವಿನಲ್ಲಿ ಪದ-ಪದ್ಯ-ಸುಳಾದಿಗಳು ನೂರಾರು. ವಾಯುಸ್ತುತಿಯ ವಿಷಯದಲ್ಲಿ ಇವರಿಗೆ ಅಪಾರ ನಂಬಿಕೆ. ಅದರ ಪಾರಾಯಣ, ಪುರಶ್ಚರಣೆಗಳಿಂದ ತಮಗೆ ಈ ವ್ಯಾಖ್ಯಾನ ಸಾಧ್ಯವಾಯಿತು ಎಂದು ಭಕ್ತಿಯಿಂದ ಹೇಳುತ್ತಾರೆ. ಅನೇಕಶಾಸ್ತ್ರೀಯ ಸೂಕ್ಷ್ಮ ತತ್ತ್ವಗಳನ್ನು ತಮ್ಮ ಟಿಪ್ಪಣಿಯಲ್ಲಿ ನಿರ್ಣಯಮಾಡುತ್ತಾರೆ. ಸರಳಶೈಲಿಯ ಬಹುವಿಚಾರದ ಟಿಪ್ಪಣಿ ಇದು. ಅಪೂರ್ವಪ್ರಮೇಯಗಳನ್ನು ನಿರೂಪಿಸುವಾಗ ಶ್ರೀಮದಾಚಾರ್ಯರನ್ನು ಭಕ್ತಿಯಿಂದ ಸ್ಮರಿಸುತ್ತಾರೆ. ಇವರಿಗಿಂತಲೂ ಮೊದಲು ಇವರ ಪೀಳಿಗೆಯವರೇ ಆದ ಶ್ರೀವೇದಾಂಗತೀರ್ಥರೂ ಇದಕ್ಕೆ ವ್ಯಾಖ್ಯಾನಮಾಡಿದ್ದಾರೆ. ಭಾಗವತ, ಹರಿವಂಶ, ಮಹಾಭಾರತ ಹಾಗು ಇತರ ಪುರಾಣಗಳನ್ನು ಅಲ್ಲಲ್ಲಿ ಉದಾಹರಿಸಿ ಅವುಗಳ ಸಮನ್ವಯ ಮಾಡುತ್ತಾರೆ.

## 3. ಶ್ರೀಸತ್ಯಾಭಿನವತೀರ್ಥರು

ಇವರು ಶ್ರೀಉತ್ತರಾದಿಮಠದ ಪಂಚಾಭಿನವಕಾರರೆಂದು ಪ್ರಸಿದ್ಧರಾದ ಶ್ರೀಸತ್ಯನಾಥತೀರ್ಥರ ಶಿಷ್ಯರು . ಅಭಿನವಾಮೃತ, ಅಭಿನವತಾಂಡವ, ಅಭಿನವಗದಾ, ಅಭಿನವಚಂದ್ರಿಕಾ ಎಂಬ ನಾಲ್ಕು ಪ್ರಸಿದ್ಧಗ್ರಂಥಗಳನ್ನು ಬರೆದ ಶ್ರೀಸತ್ಯನಾಥರು, ತಮ್ಮ ಶಿಷ್ಯರೇ ಇನ್ನೊಂದು ಗ್ರಂಥವೆಂದರು. ಮಹಾಭಾರತತಾತ್ಪರ್ಯ ನಿರ್ಣಯ ಟಿಪ್ಪಣಿಯಲ್ಲದೇ ಭಾಗವತತಾತ್ಪರ್ಯಕ್ಕೂ ದುರ್ಘಟಾರ್ಥ-ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನ ಬರೆದಿದ್ದಾರೆ. ಇದಕ್ಕೆ ತಮ್ಮಿಂದ ಭಾಗವತಟಿಪ್ಪಣಿಯನ್ನು ಬರೆಸುವ ಶ್ರೀಸತ್ಯನಾಥತೀರ್ಥರ ಸಂಕಲ್ಪವೇ ಕಾರಣ ಎಂದು ಹೇಳುತ್ತಾರೆ. ಗುರುಭಕ್ತಿಯ ಮಹಾಮೂರ್ತಿ. ಸತ್ಯನಾಥತೀರ್ಥಮಹಿಮಾರತ್ನಾಕರ ಗ್ರಂಥ ಇವರ ಇನ್ನೊಂದು ಕೃತಿ. ತಮ್ಮ ಜೀವನದಲ್ಲಿ ಗುರುಗಳ ಅನುಗ್ರಹದಿಂದ ಆದ ಹಿರಿಮೆ. ಅದರಿಂದ ಆದ ಆಪತ್ಪರಿಹಾರ ಮುಂತಾದವುಗಳನ್ನು ವರ್ಣಿಸಿದ್ದಾರೆ. ಪ್ರಕೃತ

ಟಿಪ್ಪಣಿಯಲ್ಲಿ ಎಲ್ಲ ಶ್ಲೋಕಗಳಿಗೆ ವ್ಯಾಖ್ಯಾನಮಾಡಿಲ್ಲ, ಕೆಲವೇ ಶ್ಲೋಕಗಳಿಗೆ ಮಾಡಿದ್ದಾರೆ . ಆದರೆ ಶ್ರೀಮದಾಚಾರ್ಯರ ವಾಕ್ಯಗಳಲ್ಲಿ ಮೇಲೆ ತೋರುವ ಪುನರುಕ್ತಿ, ಅನನ್ವಯ, ವ್ಯರ್ಥ, ಮುಂತಾದ ದೋಷಗಳನ್ನು ಪರಿಹಾರ ಮಾಡಿದ್ದಾರೆ. ಮೊದಲಿಗೆ ಅನುವಾದ ಮಾಡಿ, ಅನ್ವಯಮಾಡಿ ಅನಂತರದಲ್ಲಿ ಆದರಿಂದ ಪರಿಹೃತವಾದ ದೋಷಗಳನ್ನು ಹೇಳಿ ಮತ್ತೆ ಸಂಕ್ಷಿಪ್ತವಾಗಿ ಉಪಸಂಹರಿಸುತ್ತಾರೆ.

## 4. ಶ್ರೀಸಂಕರ್ಷಣತೀರ್ಥರು (ಸಂಕರ್ಷಣಾಚಾರ್ಯರು)

ಇವರು ತಮ್ಮ ಗ್ರಂಥದ ಆದಿಯಲ್ಲಿ ಯಾರ ಶಿಷ್ಯರು ಎಂದು ಹೇಳಿಕೊಂಡಿಲ್ಲ. ಶ್ರೀಸತ್ಯಪರಾಯಣತೀರ್ಥರ ಶಿಷ್ಯರ ಶ್ರೀಸಂಕರ್ಷಣ ಒಡೆಯರು ಒಬ್ಬರಿದ್ದಾರೆ. ಅವರು ಹರಿಕಥಾಮೃತಸಾರಕ್ಕೆ ವ್ಯಾಖ್ಯಾನ ಬರೆದಿದ್ದಾರೆ. ಅವರು ಹಾಗು ಮಹಾಭಾರತತಾತ್ಪರ್ಯನಿರ್ಣಯಕ್ಕೆ ವ್ಯಾಖ್ಯಾನ ಬರೆದವರು ಇಬ್ಬರೂ ಒಬ್ಬರೇ ಎಂಬುದಕ್ಕೆ ಯಾವ ಮಾಹಿತಿ ದೊರೆತಿಲ್ಲ. ಕೆಲವರು ಛಲಾರಿ ಸಂಕರ್ಷಣಾಚಾರ್ಯರು ಬರೆದ ಟಿಪ್ಪಣಿಯೇ ಹೊರತು ಸಂಕರ್ಷಣತೀರ್ಥರದಲ್ಲ ಎಂದು ಅಭಿಪ್ರಾಯಪಡುತ್ತಾರೆ. ಇವರ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿ ಅನ್ವೇಷಿಸಬೇಕಾಗಿದೆ. ಇವರ ಶೈಲಿಯೂ ಸರಳ. ಮೂಲಕ್ಕೆ ಅಬಾಧಿತವಾಗಿ ಅನ್ವಯ ಅರ್ಥಗಳನ್ನು ವಿವರಿಸುವ ಈ ವ್ಯಾಖ್ಯಾನವು ವಿದ್ಯಾರ್ಥಿಗಳಿಗೆ ಅತ್ಯಂತ ಉಪಯುಕ್ತವಾಗಿದೆ.

## 5. ವರದರಾಜಾಚಾರ್ಯರು

ಇವರು ತಮ್ಮ ಗ್ರಂಥದ ಆದಿಯಲ್ಲಿ ಯಾರ ಶಿಷ್ಯರು ಮುಂತಾದ ಯಾವುದೇ ಪರಿಚಯವನ್ನು ಹೇಳಿಕೊಂಡಿಲ್ಲ. ಆದ್ಯ ವರದರಾಜಾಚಾರ್ಯರು ವ್ಯಾಖ್ಯಾನ ಬರೆದಿದ್ದಾರೆ ಎಂದು ಪ್ರತೀತಿಯಿದೆ. ಇದೇ ಅವರು ಬರೆದದ್ದು ಎಂಬುದಕ್ಕೆ ಯಾವ ಮಾಹಿತಿ ಸಿಕ್ಕಿಲ್ಲ. ಮೂಲದ ಪದ್ಯಗಳ ಪದ ಪದಾರ್ಥವನ್ನು ತಿಳಿಸುವದರಲ್ಲಿ ಅತ್ಯಂತ ಉಪಯುಕ್ತವಾಗಿದೆ. ಆದರೂ ಆವಶ್ಯಕವಾದಲ್ಲಿ ವಿವರಣೆ ಮಾಡುವ ವಿಷಯದಲ್ಲಿ ಹಿಂದೆ ಬಿದ್ದಿಲ್ಲ. ಇವರ ವ್ಯಾಖ್ಯಾನವನ್ನು ಜಂಬುಖಂಡಿ ಲಕ್ಷ್ಮೀನರಸಿಂಹಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಸಂಗ್ರಹಿಸುತ್ತಾರೆ. ಈ ವ್ಯಾಖ್ಯಾನ ವಿದ್ಯಾರ್ಥಿಗಳಿಗೆ ಅತ್ಯಂತ ಉಪಯುಕ್ತವಾಗಿದೆ.

## 6. ಜನಾರ್ದನಭಟ್ಟರು

ಇವರು ತಮ್ಮ ಪರಿಚಯವನ್ನು ಸ್ವಲ್ಪ ತಿಳಿಸಿದ್ದಾರೆ. ತಾವು ಜಮದಗ್ನಿಗೋತ್ರದವರು . ತಂದೆ ಹಿರಣ್ಯಾಚಾರ್ಯ. ಶ್ರೇಷ್ಠಪಂಡಿತರು. ತಾಯಿ ಗಂಗಾ. ಇವು ಇವರು ಪ್ರತಿ ಅಧ್ಯಾಯದ ಉಪಸಂಹಾರದಲ್ಲಿ ಹೇಳಿದ ಮಾಹಿತಿ . ಪ್ರಮಾಣ ಪದ್ಧತಿ ವ್ಯಾಖ್ಯಾನ ಮಾಡಿರುವ ಜನಾರ್ದನಸೂರಿಗಳು ಎನ್ನುವವರು ಒಬ್ಬರಿದ್ದಾರೆ. ಇಬ್ಬರೂ ಒಬ್ಬರೇ ಎನ್ನುವದಕ್ಕೆ ಮಾಹಿತಿ ದೊರೆತಿಲ್ಲ. ಆದರೆ ಒಬ್ಬರೇ ಎಂದು ಅನೇಕಜನ ಒಪ್ಪುತ್ತಾರೆ. ಪ್ರಮಾಣಪದ್ಧತಿಯ ಟಿಪ್ಪಣಿಯ ಕೊನೆಯಲ್ಲಿ ಶ್ರೀನಿವಾಸಭಟ್ಟಉಪಾಧ್ಯಾಯರ ಶಿಷ್ಯರೆಂದು. ಮಧುರೈ ತಮ್ಮ ಸ್ಥಳವೆಂದು ಹೇಳಿದ್ದಾರೆ. ಅತ್ಯಂತ ಪ್ರಸಿದ್ಧವಾದ ಟಿಪ್ಪಣಿ ಇದು. ವಿದ್ಯಾರ್ಥಿಗಳಿಗೂ ಹಾಗು ವಿದ್ವಾಂಸರಿಗೂ ಉಪಯುಕ್ತವಾದ ಶ್ರೇಷ್ಠ ಟಿಪ್ಪಣಿ. ಅನೇಕ ವಿಷಯಗಳಲ್ಲಿ ಸರ್ವಮೂಲ, ಪುರಾಣಗಳು ಮುಂತಾದವುಗಳನ್ನು ಉದಾಹರಿಸಿ ಶ್ರೀಮದಾಚಾರ್ಯರ ಮಾತನ್ನು ಸಮರ್ಥಿಸಿದ್ದಾರೆ . ಶ್ರೀವೇದಾಂಗತೀರ್ಥರ ವ್ಯಾಖ್ಯಾನವನ್ನು ಅನುಸರಿಸಿ ವ್ಯಾಖ್ಯಾನ ಮಾಡುತ್ತೇವ ಎಂದು ಹೇಳುತ್ತಾರೆ. ಆದರೆ ಎಲ್ಲೂ ಉಲ್ಲೇಖಮಾಡಿದ್ದು ಕಂಡಿಲ್ಲ.ಇವರ ವ್ಯಾಖ್ಯಾನವನ್ನು ಜಂಬುಖಂಡಿ ಲಕ್ಷ್ಮೀನರಸಿಂಹಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಸೇರಿಸುತ್ತಾರೆ.

## 7. ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು

ತಾಮ್ರಪರ್ಣಿ ಶ್ರೀನಿವಾಸಾಚಾರ್ಯರ ಕಾಲದ ಬಗ್ಗೆ ವಿವರವಿಲ್ಲ. ಇವರು ತಾಮ್ರಪರ್ಣಿ ವಿಠ್ಠಲಾಚಾರ್ಯರ ಮಕ್ಕಳು . ಇವರ ತಂದೆಯ ಗುರುಗಳು ನಾರಾಯಣಾಚಾರ್ಯರು. ಅವರ ಗುರುಗಳು ನರಸಿಂಹಾಚಾರ್ಯರು. ಇವರನ್ನು ತಮ್ಮ ವ್ಯಾಖ್ಯಾನದಲ್ಲಿ ಸ್ಮರಿಸುತ್ತಾರೆ .ಅವರ ಸಂಪ್ರದಾಯವನ್ನು ಮತ್ತು ಅವರ ವಿಚಾರಗಳನ್ನು ಹೇಳಿ ಸಮರ್ಥನೆ ಮಾಡುತ್ತಾರೆ. ತಮ್ಮ ಅಣ್ಣಂದಿರಾದ ತಾಮ್ರಪರ್ಣೀ ಆನಂದತೀರ್ಥಾಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡಿದವರು ಎಂದು ಮಂಗಳಾಚರಣೆಯಿಂದ ತಿಳಿದು ಬರುತ್ತದೆ.

ಶ್ರೀಮನ್ನೃಸಿಂಹಾರ್ಯಮುಖೇಂದುಬಿಂಬಾತ್ ಪ್ರವತ್ತುತತ್ತ್ವಾಮೃತಪಾನತೃಪ್ತಾತ್ ।
ನಾರಾಯಣಾರ್ಯಾತ್ ಸಮವಾಪ ವಿದ್ಯಾಸ್ತಂ ವಿಠ್ಠಲಾರ್ಯಂ ಚ ಭಜೇ ಪರಂ ಗುರುಮ್ ॥
ಶ್ರೀವಿಠ್ಠಲಾರ್ಯತನುಜಶ್ರೀಮತ್ತೀರ್ಥಾರ್ಯಸದ್ಗುರೋಃ ।
ಸ್ಮೃತ್ವಾ ಪದಾಬ್ಜೇ ವ್ಯಾಕುರ್ವೇ ಮಹಾಭಾರತನಿರ್ಣಯಮ್ ॥

ಇವರ ಶೈಲಿ ಸರಳವಾಗಿದೆ ಮತ್ತು ಹೇಳಿದ ವಿಷಯವನ್ನು ಆಚಾರ್ಯರ ಬೇರೆ ಬೇರೆ ಗ್ರಂಥಗಳ ಮಾತಿನಿಂದ ಸಮರ್ಥನೆ ಮಾಡುತ್ತರೆ. ಪದ್ಮನಾಭತೀರ್ಥರು, ನರಹರಿತೀರ್ಥರು, ತ್ರಿವಿಕ್ರಮಪಂಡಿತಾಚಾರ್ಯರೇ ಮುಂತಾದವರ ಗ್ರಂಥಗಳನ್ನು

ಉದಾಹರಿಸುತ್ತಾರೆ. ಅವರೆಲ್ಲರ ಮೇಲೆ ವಿಶೇಷವಾದ ಗೌರವಾದರಗಳಿಂದ ಅವರ ವಿಷಯಗಳನ್ನು ಸಮರ್ಥಿಸುತ್ತಾರೆ. ಅದರಲ್ಲಿ ತತ್ತ್ವಪ್ರದೀಪ, ಶ್ರೀನರಹರಿತೀರ್ಥರ ಯಮಕಭಾರತ ಟೀಕೆ, ಗೀತಾಭಾಷ್ಯ ಟೀಕೆಗಳನ್ನು ಅನೇಕಕಡೆಗೆ ಉದಾಹರಿಸುತ್ತಾರೆ . ಅನೇಕ ವಿಚಾರಗಳಿಂದ ಕೂಡಿದ ಅಪೂರ್ವ ಗ್ರಂಥ ಈ ಟಿಪ್ಪಣೀ . ಅಷ್ಟೇ ಅಲ್ಲದೆ ಅನೇಕ ಬೇರೆ ವ್ಯಾಖ್ಯಾನಪಕ್ಷಗಳನ್ನು ಹೇಳಿ ವಿಮರ್ಶೆ ಮಾಡುತ್ತಾರೆ. ಆದರೆ ಅವರ ಹೆಸರನ್ನು ಉಲ್ಲೇಖಮಾಡುವದಿಲ್ಲ. ಅನೇಕ ಕಡೆ ತಮ್ಮದೇ ಆದ ರೀತಿಯಲ್ಲಿ ವಿಶಿಷ್ಟವ್ಯಾಖ್ಯಾನ ಮಾಡುವ ಪದ್ಧತಿ ಇವರದು. ಇವರ ವ್ಯಾಖ್ಯಾನವನ್ನು ಜಂಬುಖಂಡಿ ಲಕ್ಷ್ಮೀನರಸಿಂಹಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಶ್ರೀನಿವಾಸಭಟ್ಟೀಯ ಎಂದು ಉಲ್ಲೇಖಿಸುತ್ತಾ ಸೇರಿಸುತ್ತಾರೆ. ಇವರು ಇದಲ್ಲದೆ ಐತರೇಯ - ಬೃಹದಾರಣ್ಯಕ - ಷಟ್ಪ್ರಶ್ನ ಭಾಷ್ಯಗಳಿಗೆ ವ್ಯಾಖ್ಯಾನ, ಗೀತಾಭಾಷ್ಯಟೀಕಾ - ಗೀತಾತಾತ್ಪರ್ಯ ಟೀಕಾ ಟಿಪ್ಪಣೀ, ಭಾಗವತತಾತ್ಪರ್ಯನಿರ್ಣಯ ಟಿಪ್ಪಣೀ, ಯಮಕಭಾರತ ಟಿಪ್ಪಣೀ, ತತ್ತ್ವಪ್ರಕಾಶಿಕಾ ಟಿಪ್ಪಣೀ (ಪ್ರಮೇಯಮುಕ್ತಾವಲಿ ಮತ್ತು ವಾಕ್ಯಾರ್ಥಮುಕ್ತಾವಲಿ), ತಂತ್ರಸಾರ ಟಿಪ್ಪಣೀ, ತತ್ತ್ವಸಂಖ್ಯಾನ-ತತ್ತ್ವವಿವೇಕ ಟೀಕಾ ಟಿಪ್ಪಣೀ, ಕೃಷ್ಣಾಮೃತಮಹಾರ್ಣವ ಟಿಪ್ಪಣೀ, ಸ್ಮೃತಿಸಂಗ್ರಹ, ಏಕಾದಶೀ ನಿರ್ಣಯ, ಗೋತ್ರಪ್ರವರನಿರ್ಣಯ, ತತ್ತ್ವಸಂಗ್ರಹ, ಪ್ರಮಾಣಸಂಗ್ರಹ, ಸೃಷ್ಟಿಮುಕ್ತಾವಳೀ, ತಾರತಮ್ಯ-ಸ್ತೋತ್ರಟೀಕಾ, ವಿರೋಧೋದ್ಧಾರ, ವಾಯುಲೀಲಾಮೃತ ಮೊದಲಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

## 8. ಜಂಬುಖಂಡಿ ಲಕ್ಷ್ಮೀನರಸಿಂಹಾಚಾರ್ಯರು

ಇವರ ಕಾಲ ಮುಂತಾದವುಗಳ ಬಗ್ಗೆ ಯಾವ ಮಾಹಿತಿ ದೊರೆತಿಲ್ಲ. ಆದರೆ ಪ್ರತಿ ಅಧ್ಯಾಯದ ಕೊನೆಯಲ್ಲಿ ''ಇತಿ ಶ್ರೀ ರೋಟ್ಟಿ ರಮಣಾಚಾರ್ಯ ಶಿಷ್ಯೇಣ ಜಂಬುಖಂಡಿ ಲಕ್ಷ್ಮೀನರಸಿಂಹಾಚಾರ್ಯಣೇನ ವಿರಚಿತಾಯಾಂ ಮಹಾಭಾರತತಾತ್ಪರ್ಯ ನಿರ್ಣಯ ಟಿಪ್ಪಣ್ಯಾಂ ....'' ಎಂದು ಹೇಳಿದ್ದಾರೆ. ಇದರಿಂದ ರೊಟ್ಟಿರಮಣಾಚಾರ್ಯರ ಶಿಷ್ಯರು ಎಂದು ತಿಳಿಯುತ್ತದೆ. ಇವರು ತಮ್ಮ ವ್ಯಾಖ್ಯಾನದಲ್ಲಿ ವಾದಿರಾಜೀಯ, ವರದರಾಜೀಯ, ಶ್ರೀನಿವಾಸಭಟ್ಟೀಯ, ಜನಾರ್ದನಭಟ್ಟೀಯ ಟಿಪ್ಪಣಿಗಳನ್ನು ಸಂಗ್ರಹ ಮಾಡಿ ವ್ಯಾಖ್ಯಾನ ಮಾಡುತ್ತಾರೆ . ಅಂತೆಯೆ ಇವರು 'ಮಹಾಭಾರತತಾತ್ಪರ್ಯಟೀಕಾಸಂಗ್ರಹ ಉಚ್ಯತೇ' ಎಂದು ಗ್ರಂಥದ ಆರಂಭದಲ್ಲಿ ಪ್ರತಿಜ್ಞೆ ಮಾಡಿದ್ದಾರೆ. ಅಷ್ಟೇ ಅಲ್ಲದೆ ಅಪೂರ್ವವಾದ ಅನೇಕ ವಿಚಾರಗಳಿಂದ ಕೂಡಿದ ನಾರಾಯಣಾಧ್ವರಿ ಎಂಬುವರ ವ್ಯಾಖ್ಯಾನವನ್ನೂ ಸಂಗ್ರಹ ಮಾಡುತ್ತಾರೆ. ಆದರೆ ಈ ವ್ಯಾಖ್ಯಾನವು ಈ ವರೆಗೆ ಉಪಲಬ್ಧವಾಗಿಲ್ಲ.

## 9. ಭಾರತ ಶ್ರೀನಿವಾಸಾಚಾರ್ಯರು

ಇವರ ಮಂಗಳಾಚರಣೆ ಉಪಲಬ್ಧವಿಲ್ಲ. ಆದರೆ ಗ್ರಂಥದ ಅಂತ್ಯದಲ್ಲಿ 'ಇತಿ ಶ್ರೀಡಂಬಲ ಅನಂತಾಚಾರ್ಯಶಿಷ್ಯಕೃತ ಶ್ರೀಮಹಾಭಾರತತಾತ್ಪರ್ಯನಿರ್ಣಯಟಿಪ್ಪಣ್ಯಾಂ ........' ಎಂದು ಮುಗಿಸಿದ್ದಾರೆ. ಇದರಿಂದ ಇವರು ಡಂಬಲ ಅನಂತಾಚಾರ್ಯ ಶಿಷ್ಯರೆಂದು ಸ್ಪಷ್ಟವಾಗುತ್ತದೆ. ಆದರೆ ಈ ಗುರುಶಿಷ್ಯರ ಬಗ್ಗೆ ಯಾವ ಮಾಹಿತಿ ದೊರೆತಿಲ್ಲ. ಟಿಪ್ಪಣಿ ಸಂಕ್ಷಿಪ್ತವಾಗಿದೆ. ಪ್ರತಿ ಅಧ್ಯಾಯದಲ್ಲೂ ಕೆಲವೇ ಶ್ಲೋಕಗಳಿಗೆ ಬರೆದರೂ ಅತ್ಯಂತ ಉಪಯುಕ್ತವಾಗಿದೆ, ಅನೇಕ ಮಹತ್ವವಿಷಯಗಳಿಂದ ಕೂಡಿದೆ .

## 10. ರಾಮಾಚಾರ್ಯರು

ಇವರ ಬಗೆಗೂ ಯಾವ ಮಾಹಿತಿ ದೊರೆತಿಲ್ಲ. ಮಂಗಳಾಚರಣದಲ್ಲಿ ವ್ಯಾಸರಾಯರಿಗೆ ನಮಸ್ಕರಿಸಿ , ರಘುನಾಥಮುನಿಗಳಿಗೆ ನಮಸ್ಕಾರವೆಂದು ಹೇಳಿದ್ದಾರೆ . ಈ ರಘುನಾಥತೀರ್ಥರು ಯಾರು ತಿಳಿಯದು . ಹಾಗೆ ಪೂರ್ಣಬೋಧರು ಎಂಬ ಗುರುಗಳಿಗೆ ನಮಸ್ಕಾರ ಎಂದು ಹೇಳಿದ್ದಾರೆ. ಆದರೆ ಇವರಾರ ಬಗೆಗೂ ವಿವರ ದೊರೆತಿಲ್ಲ. ತಮ್ಮ ವ್ಯಾಖ್ಯಾನದ ಕೊನೆಯಲ್ಲಿ ಇವರು 'ಇತಿ ಶ್ರೀವಾಸುದೇವಯತಿ ಪೂರ್ವಾಶ್ರಮತನುಜ ರಾಮಕೃತೌ ...' ಇವರ ವ್ಯಾಖ್ಯಾನ ಕೆಲವೇ ಶ್ಲೋಕಗಳಿಗಿವೆ. ಆದರೆ ಯಾವ ಶ್ಲೋಕಗಳಿಗೆ ಬರೆದಿರುವರೋ ಅದಕ್ಕೆ ಅತ್ಯಂತ ವಿಸ್ತಾರವಾಗಿ ಬರೆದಿದ್ದಾರೆ. ಅಲ್ಲಿಯ ವಿಚಾರಗಳನ್ನು ಬೇರೆ ಟಿಪ್ಪಣೀಕಾರರ ಮಾತುಗಳನ್ನು ವಿಮರ್ಶಿಸಿ ಬರೆದಿದ್ದಾರೆ. ಸರ್ವಮೂಲದಲ್ಲಿಯ ಆ ವಿಷಯಕ್ಕೆ ಸಂಬಂಧಪಟ್ಟ ಪ್ರಮಾಣಗಳನ್ನು ವಿಚಾರ ಮಾಡಿ ನಿರೂಪಣೆಮಾಡಿದ್ದಾರೆ .

## ವ್ಯಾಖ್ಯಾನಗಳ ಮುದ್ರಣಕ್ಕೆ ಅವಲಂಬಿಸಿದ ಮೂಲಕೋಶಗಳ ಮಾಹಿತಿ

1. ವ್ಯಾಸತೀರ್ಥೀಯಾ—ವ್ಯಾಸತೀರ್ಥರು ಬರೆದ ಭಾರತಭಾವಪಂಚಿಕಾ ಮಹಾಭಾರತತಾತ್ಪರ್ಯನಿರ್ಣಯಕ್ಕೆ ಸಿಗುವ ಮೊದಲ ವ್ಯಾಖ್ಯಾನ. ಇದರ ಮುದ್ರಣಕ್ಕೆ ಅವಲಂಬಿಸಿರುವ ಮೂಲಕೋಶಗಳು ಎರಡು. ಎರಡೂ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು ಕೊಟ್ಟದ್ದು. ಮೊದಲನೆಯದು ಇತ್ತೀಚಿನವರು ಪ್ರತಿಮಾಡಿದ್ದು. ಅನೇಕ ಕಡೆ ಅಸ್ಪಷ್ಟವಾಗಿದೆ. ಲಿಪಿಕಾರರ ದೋಷಗಳು ಅನೇಕ. ಮತ್ತೊಂದು ನಂದಿನಾಗರಿಲಿಪಿಯಲ್ಲಿದೆ. ಈ ಪ್ರತಿ ಅತ್ಯಂತ ಶುದ್ಧವಾಗಿದೆ. ಆದರೆ ಇದು ಐದನೆಯ ಅಧ್ಯಾಯದಿಂದ ಉಪಲಬ್ಧವಾಗಿದೆ. ಮೊದಲಿನ ನಾಲ್ಕು ಅಧ್ಯಾಯದ ವರೆಗೆ ಇದು ಉಪಲಬ್ಧವಿಲ್ಲ. ಆದ್ದರಿಂದ ಮೊದಲಿನ ಮೂರು ಅಧ್ಯಾಯಗಳಿಗೆ

ಶುದ್ಧಪ್ರತಿ ಉಪಲಬ್ಧವಾಗದಿರುವದರಿಂದ ಕೆಲವು ಕಡೆ ವಾಕ್ಯಗಳು ಅಸ್ಪಷ್ಟವಾಗಿ, ಇನ್ನು ಅನೇಕ ಕಡೆ ತ್ರುಟಿತವಾಗಿವೆ. ಆದಷ್ಟು ಶುದ್ಧಪಾಠವನ್ನು ಕೊಡಲು ಪ್ರಯತ್ನಿಸಿದ್ದೇವೆ. ತಪ್ಪಿದ್ದಲ್ಲಿ ಅಧ್ಯೇತೃಗಳು ಕ್ಷಮಿಸಬೇಕೆಂದು ಕೋರುತ್ತೇವೆ.

2. ವಾದಿರಾಜೀಯಾ—ಶ್ರೀವಾದಿರಾಜತೀರ್ಥರ ಭಾವಪ್ರಕಾಶಿಕಾ ಇದು ಈಗಾಗಲೇ ಎರಡು ಬಾರಿ ಮುದ್ರಣವಾಗಿದೆ. ಇದರಲ್ಲಿ ಮೊದಲನೆಯದು ಪಂ.ಶ್ರೀನಾರಾಯಣತಂತ್ರಿಗಳಿಂದ ಸಂಪಾದಿತವಾಗಿ ಶೀರೂರು ಮಠದಿಂದ ಪ್ರಕಾಶನಗೊಂಡಿದೆ. ಮತ್ತೊಂದು ಈಚೆಗೆ ಡಾ.ಶ್ರೀವ್ಯಾಸನಕೆರೆ ಪ್ರಭಂಜನಾಚಾರ್ಯರು ಪ್ರಕಾಶಿಸಿದ್ದಾರೆ. ಇದರಲ್ಲಿ ಮೊದಲನೆಯ ಪುಸ್ತಕವನ್ನು ಆಧರಿಸಿ ಮುದ್ರಿಸಿದ್ದೇವೆ. ಇದರಲ್ಲೂ ಇದ್ದ ಮುದ್ರಣದೋಷಗಳನ್ನು ಸರಿಪಡಿಸಿ ಆದಷ್ಟು ಶುದ್ಧಮಾಡಲು ಪ್ರಯತ್ನಿಸಿದ್ದೇವೆ.

3. ವ್ಯಾಖ್ಯಾನವರ ಟಿಪ್ಪಣೀ—ಶ್ರೀವ್ಯಾಖ್ಯಾನವರ ಕೃತಿ ದುರ್ಘಟಾರ್ಥಪ್ರಕಾಶಿಕಾ. ಇದು ಹಿಂದೆ, ಪಂ.ಗಲಗಲಿ ರಾಮಾಚಾರ್ಯರಿಂದ ಸಂಶೋಧಿತವಾಗಿ ಸತ್ಯಧ್ಯಾನ ವಿದ್ಯಾಪೀಠದಿಂದ 1968ರಲ್ಲಿ ಪ್ರಕಾಶಿತವಾಗಿದೆ . ಇದನ್ನೇ ಆಧಾರವಾಗಿಟ್ಟುಕೊಂಡು ಈ ವ್ಯಾಖ್ಯಾನವನ್ನು ಮುದ್ರಿಸಲಾಗಿದೆ.

4. ಸಂಕರ್ಷಣತೀರ್ಥೀಯಾ—ಶ್ರೀಸಂಕರ್ಷಣತೀರ್ಥರು ಬರೆದ ಟಿಪ್ಪಣೀ ಶುಭಪ್ರಕಾಶಿಕಾ. ಇದರ ಮೂಲಕೋಶಗಳು ಶ್ರೀಸತ್ಯಾತ್ಮತೀರ್ಥರು ಕೊಟ್ಟದ್ದು. ಒಟ್ಟು ಎರಡು ಪ್ರತಿಗಳು.ಒಂದು ಪ್ರಾಚೀನ ಹಸ್ತಪ್ರತಿಯನ್ನು ನೋಡಿ ಇತ್ತೀಚಿನವರು ಪ್ರತಿಮಾಡಿದ್ದು. ಇದು ಎರಡನೇ ಅಧ್ಯಾಯದ ಐವತ್ತು ಶ್ಲೋಕದ ವರೆಗೆ ಇದೆ. ಅತ್ಯಂತ ಶುದ್ಧವಾದ ಪ್ರತಿ . ಇನ್ನೊಂದು ಪ್ರತಿ ಮೂರು ಅಧ್ಯಾಯಗಳವರೆಗೆ ಮಾತ್ರ ಉಪಲಬ್ಧವಾಗಿದೆ.ಇದೂ ಶುದ್ಧವಾಗಿದೆ. ಒಂದೆರಡು ಕಡೆಮಾತ್ರ ತ್ರುಟಿತವಾಗಿದೆ.

5. ವರದರಾಜೀಯಾ—ವರದರಾಜಾಚಾರ್ಯರು ಬರೆದ ಟಿಪ್ಪಣೀ. ಇದರ ಪ್ರತಿ ಒಟ್ಟು ನಾಲ್ಕು. ಶ್ರೀಸತ್ಯಾತ್ಮತೀರ್ಥರು ಕೊಟ್ಟ ಪ್ರತಿ ಎರಡು. ಸತ್ಯಧ್ಯಾನ ವಿದ್ಯಾಪೀಠದ ಎರಡು ಪ್ರತಿ. ಎಲ್ಲಾ ಪ್ರತಿಗಳೂ ಪ್ರಾಯ: ಶುದ್ಧವಾಗಿವೆ.

6. ಜನಾರ್ದನರ ಟಿಪ್ಪಣಿ—ಇವರ ಟಿಪ್ಪಣೀ ಪದಾರ್ಥಪ್ರಕಾಶಿಕಾ. ಇದನ್ನು ಹಿಂದೆ ಪಂ.ಟಿ. ಆರ್. ಕೃಷ್ಣಾಚಾರ್ಯರು ಸಂಪಾದಿಸಿ, ನಿರ್ಣಯ ಸಾಗರ ಮುದ್ರಣಾಲಯದಲ್ಲಿ ಪ್ರಕಾಶಿಸಿದ್ದಾರೆ.ಅದನ್ನೇ ಇಲ್ಲಿ ಆಧರಿಸಿದ್ದೇವೆ.

7. ತಾಮ್ರಪರ್ಣೀ ಟಿಪ್ಪಣೀ—ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು ಬರೆದ ಟಿಪ್ಪಣೀ ಪ್ರಮೇಯಮಣಿಮಾಲಾ. ಇದರ ಉಪಲಬ್ಧವಾದ ಪ್ರತಿಗಳು ಎರಡು. ಒಂದು ಬೆಂಗಳೂರಿನ ಉತ್ತರಾದಿಮಠದ ಗ್ರಂಥಾಲಯದಲ್ಲಿ ಇದ್ದದ್ದು.ಇನ್ನೊಂದು ಹೊಸಪೇಟೆಯ ಉತ್ತರಾದಿಮಠದ ಗ್ರಂಥಾಲಯದಲ್ಲಿ ಇದ್ದದ್ದು.ಎರಡೂ ಶುದ್ಧವಾಗಿವೆ. ಬೆಂಗಳೂರಿನ ಹಸ್ತಪ್ರತಿ ವಿಸ್ತಾರವಾಗಿದೆ. ಇದನ್ನೇ ಪ್ರಧಾನವಾಗಿ ಮುದ್ರಣಕ್ಕೆ ಆಧರಿಸಲಾಗಿದೆ. ಹೊಸಪೇಟೆಯ ಪ್ರತಿಯಲ್ಲಿ ಕೆಲವೆಡೆ ಹೆಚ್ಚಿನ ವಾಕ್ಯಗಳು ಇವೆ. ಅದನ್ನು 'ಇತಿ ಹೋ. ಪುಸ್ತಕೇ ಅಧಿಕ: ಪಾಠ: ದೃಶ್ಯತೇ ಎಂದು ಅಡಿಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

8. ಜಂಬುಖಂಡಿ ಟಿಪ್ಪಣೀ—ಇದರ ಪ್ರತಿ ಶ್ರೀಸತ್ಯಾತ್ಮತೀರ್ಥರು ಅನುಗ್ರಹಿಸಿದ್ದು. ಶುದ್ಧವಾಗಿದೆ. ಇದರಲ್ಲಿ ವಾದಿರಾಜೀಯ, ವರದರಾಜೀಯ, ಜನಾರ್ದನಭಟ್ಟೀಯ, ತಾಮ್ರಪರ್ಣೀ ಟಿಪ್ಪಣೀ ವಾಕ್ಯಗಳನ್ನು ಯಥಾವತ್ತಾಗಿ ಉದಾಹರಿಸಿರುತ್ತಾರೆ. ಅವುಗಳಲ್ಲಿ ಕೆಲವು ವಾಕ್ಯಗಳು ಮೇಲೆ ಹೇಳಿರುವ ಟಿಪ್ಪಣಿಗಳ ಉಪಲಬ್ಧವಾದಪ್ರತಿಗಳಲ್ಲಿ ಈಗ ಸಿಗುವದಿಲ್ಲ, ಆದರೆ ಅವುಗಳನ್ನು ಆ ಆ ಟಿಪ್ಪಣಿಗಳಲ್ಲಿ ನಾವು ಸೇರಿಸಿಲ್ಲ, ನಮಗೆ ಉಪಲಬ್ಧವಾದಂತೆ ಮುದ್ರಿಸಿದ್ದೇವೆ.

9. ಭಾರತ ಶ್ರೀನಿವಾಸಾಚಾರ್ಯರ ಟಿಪ್ಪಣೀ—ಇದರ ಪ್ರತಿಗಳು ಎರಡು . ಒಂದು ಶ್ರೀ ಸತ್ಯಾತ್ಮತೀರ್ಥರು ಅನುಗ್ರಹಿಸಿದ್ದು. ಇದು ಎರಡು ಅಧ್ಯಾಯಗಳವರೆಗೆ ಮಾತ್ರ ಉಪಲಬ್ಧವಿದೆ. ಇನ್ನೊಂದು ಮೈಸೂರಿನ ಪ್ರಾಚ್ಯ ವಿದ್ಯಾಸಂಶೋಧನಾಲಯದ ಪ್ರತಿ. ಇದು ಪೂರ್ಣವಾಗಿ ಉಪಲಬ್ಧವಾಗಿದ್ದು ನಂದಿನಾಗರಿ ಲಿಪಿಯಲ್ಲಿದೆ. ಎರಡೂ ಶುದ್ಧವಾದ ಪ್ರತಿಗಳೇ.

10. ರಾಮಾಚಾರ್ಯಟಿಪ್ಪಣೀ—ಇದರ ಪ್ರತಿ ಒಂದು. ಶ್ರೀಸತ್ಯಾತ್ಮತೀರ್ಥರು ಅನುಗ್ರಹಿಸಿದ್ದು. ಮೂರು ಅಧ್ಯಾಯಗಳವರೆಗೆ ಮಾತ್ರ ಉಪಲಬ್ಧವಾಗಿದೆ.ಅತ್ಯಂತ ಶುದ್ಧವಾಗಿದೆ.

## ನಮ ಉಕ್ತಿಂ ವಿಧೇಮ

ಶ್ರೀ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು ಈ ಶತಮಾನ ಕಂಡ ದಿವ್ಯ ತಪಸ್ವಿಗಳು ಮತ್ತು ಮಹಾಜ್ಞಾನಿಗಳು. ರಾಮದೇವರ ಪೂಜೆ ಹಾಗು ಶ್ರೀಮನ್ನ್ಯಾಯಸುಧಾದಿಗ್ರಂಥಗಳ ಪಾಠ ಪ್ರವಚನಗಳೇ ಅವರ ಜೀವನದ ಉಸಿರಾಗಿತ್ತು. ಇಡಿಯಾದ ಮಾಧ್ವಸಮಾಜವನ್ನೇ ತಮ್ಮ ಕರುಣೆಯ ಕಡಲಲ್ಲಿ ಮುಳುಗಿಸಿ ಪೋಷಿಸಿದವರು. ಈ ಮಹಾನುಭಾವರ ಪ್ರಯತ್ನ ಹಾಗು

ಪರಮಾನುಗ್ರಹಗಳೇ ಈ ಗ್ರಂಥವು ಪ್ರಕಾಶನವಾಗುವದಕ್ಕೆ ಕಾರಣ. ಪ್ರತಿನಿತ್ಯ ರಾಮದೇವರಪೂಜೆ, ಪಾಠ -ಪ್ರವಚನಗಳು, ಲಕ್ಷಾವಧಿ ಭಕ್ತರ ಅನುಗ್ರಹ ಈ ಎಲ್ಲ ಕಾರ್ಯಕ್ರಮಗಳ ನಡುವೆಯೂ, ಹಸಿವು ಬಾಯಾರಿಕೆ ಲೆಕ್ಕಿಸದೆ, ಹಗಲು ರಾತ್ರಿ ಎನ್ನದೆ ಊರೂರು ತಿರುಗಿ ಹತ್ತಾರು ವರ್ಷ ಕಷ್ಟಪಟ್ಟು ಅನೇಕ ಅಪೂರ್ವ- ಅಮೂಲ್ಯ ಟೀಕಾ ಟಿಪ್ಪಣಿಗಳನ್ನು ಸಂಗ್ರಹಮಾಡಿಟ್ಟಿದ್ದಾರೆ. ಇದು ಅವರು ಮಾಧ್ವ ಸಮಾಜಕ್ಕೆ ಮಾಡಿದ ಪರಮಾನುಗ್ರಹ. ಇದಕ್ಕಾಗಿ ಅವರಿಗೆ ಭಕ್ತಿಶ್ರದ್ಧಾಪೂರ್ವಕವಾದ ಅನಂತ ಜನ್ಮದ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳು. ಅವರ ಸಂಗ್ರಹಸಿಂಧುವಿನ ಒಂದು ಬಿಂದುವೇ ಈ ಗ್ರಂಥ.

ಶ್ರೀ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಐವತ್ತು ವರ್ಷದ ತಪಸ್ಸಿನ ಫಲವೇ ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು. ಈ ಫಲವನ್ನು ಕರುಣಿಸಿದ ಆ ಮಹಾನುಭಾವರಿಗೆ ಮತ್ತೊಮ್ಮೆ ಕೋಟಿ ಕೋಟಿ ಪ್ರಣಾಮಗಳು. ಶ್ರೀ ಸತ್ಯಾತ್ಮತೀರ್ಥರದು ಹದಿನೆಂಟರ ಹರೆಯಲ್ಲೂ ಎಂಬತ್ತರ ಪಕ್ವತೆ. ಇವರು ಎಷ್ಟು ಸಂಪ್ರದಾಯನಿಷ್ಠರೋ ಅಷ್ಟೇ ಆಧುನಿಕರು. ಒಂದರ್ಥದಲ್ಲಿ ಹಳೇ ಬೇರು ಹೊಸ ಚಿಗುರು. ಸಮಗ್ರ ಸಮಾಜವನ್ನು ತಮ್ಮ ಹಸನ್ಮುಖದಿಂದ ಸಂತೈಸುವ ಭಗವಂತನ ಚಲ ಪ್ರತಿಮರು. ಅವರು ಈಗಿನ ಸಮಾಜಕ್ಕೆ ದಾರಿದೀಪ . ಪಾಠ ಪ್ರವಚನ ಮಾಡುವ ಪಂಡಿತರಿಗೆ ಆಶ್ರಯ ಭೂಮಿ. ವಿದ್ಯಾರ್ಥಿಗಳನ್ನು ಸಿದ್ಧಪಡಿಸುವದು ಅವರ ವ್ರತ. ಸಿದ್ಧಾಂತ ಪ್ರಚಾರ ಅವರ ಉಸಿರು. ಅದರ ಸಂರಕ್ಷಣೆಗೆ ತಮ್ಮನ್ನೇ ಅರ್ಪಿಸಿಕೊಂಡಿದ್ದಾರೆ. ಸಂಶೋಧನ ಕಾರ್ಯಕ್ಕಾಗಿಯೇ ಅವರ ಸರ್ವಸ್ವ. ಈಗಾಗಲೇ ಸಮಾಜಕ್ಕಾಗಿ ವಿದ್ಯಾರ್ಥಿಗಳಿಗಾಗಿ ನೂರಾರು ಗ್ರಂಥಗಳನ್ನು ಪ್ರಕಾಶಿಸಿ ಪರಮಾನುಗ್ರಹ ಮಾಡಿದ್ದಾರೆ. ಈ ಗುರುಗಳು ಪರಮಾನುಗ್ರಹ ಮಾಡಿ ನಮಗೆ ಈ ಗ್ರಂಥದ ಸಂಶೋಧನಕ್ಕೆ ಆಜ್ಞಾಪಿಸಿದರು. ಪೂಜ್ಯ ಹಿರಿಯ ಶ್ರೀಗಳವರು ಸಂಗ್ರಹಿಸಿದ ಹಸ್ತಪ್ರತಿಗಳನ್ನು ಕರುಣಿಸಿ ಈ ಕೆಲಸಕ್ಕೆ ಶ್ರೀಕಾರ ಹಾಕಿದ ಶ್ರೀಗಳವರಿಗೆ ನಮ್ಮ ಭಕ್ತಿಶ್ರದ್ಧಾಪೂರ್ವಕವಾದ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳು.

ಪಂಡಿತ ಸಮಾಜವೇ ಬೆರಳು ಕಚ್ಚುವಷ್ಟು ಪಾಂಡಿತ್ಯವಿದ್ದರೂ, ಅತ್ಯಂತ ಎತ್ತರದ ವ್ಯಕ್ತಿಯಾದರೂ, ಅತ್ಯಂತ ಸರಳಹೃದಯಿಗಳಾದ, ಜಯತೀರ್ಥ ವಿದ್ಯಾಪೀಠದ ಕುಲಪತಿಗಳಾದ ಪೂಜ್ಯ ಆಚಾರ್ಯರವರು (ಗುತ್ತಲಾಚಾರ್ಯರು) ತಮ್ಮ ನಿರಂತರವಾದ ಶ್ರೀಮನ್ನ್ಯಾಯ ಸುಧಾದಿ ಉದ್ಗ್ರಂಥಗಳ ಅಧ್ಯಾಪನದ ನಡುವೆಯೂ ಅಡಿಟಿಪ್ಪಣಿಗಳಲ್ಲಿ ಸಂಗ್ರಹಿಸಿದ ಪ್ರಮಾಣಗಳ ಯುಕ್ತಾಯುಕ್ತತೆಯನ್ನು ಪರಿಶೀಲಿಸಿ ಈ ಕಾರ್ಯಕ್ಕೆ ನಮ್ಮನ್ನು ಅನುಗ್ರಹಿಸಿ, ಪ್ರೋತ್ಸಾಹಿಸಿದ್ದಾರೆ. ಅವರಿಗೆ ನಮ್ಮ ಭಕ್ತಿಪೂರ್ವಕವಾದ ಅನಂತ ನಮಸ್ಕಾರಗಳು.

ಶ್ರೀಗಳವರು ಸಂಶೋಧನ ಕೆಲಸಕ್ಕೆ ಆಜ್ಞಾಪಿಸಿದರು, ಆದರೆ ಇದು ನಮಗೆ ತಿಳಿಯದ ವಿಷಯ. ಈ ಕೆಲಸಕ್ಕೆ ನಮ್ಮನ್ನು ಪ್ರೋತ್ಸಾಹಿಸಿದವರೂ, ತಮ್ಮ ದಿನ ನಿತ್ಯದ ಪಾಠ ಪ್ರವಚನಗಳ ನಡುವೆಯೂ, ಹೆಜ್ಜೆ ಹೆಜ್ಜೆಗೆ ದಾರಿತೋರಿ ಅನುಗ್ರಹಿಸಿದವರು, ನಮ್ಮಂತಹ ನೂರಾರು ವಿದ್ಯಾರ್ಥಿಗಳಿಗೆ ಪ್ರತಿನಿತ್ಯದಲ್ಲೂ ಅನ್ನ-ವಸನಗಳನ್ನಿತ್ತು , ಪಾಠವನ್ನು ಹೇಳಿ, ಸನ್ಮಾರ್ಗ ತೋರಿ, ಭಗವಂತನ ದರ್ಶನದ ಸಾಧನ ಮಾರ್ಗದಲ್ಲಿ ನಡೆಸುತ್ತಿರುವ ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಮಾಹುಲಿ ಆಚಾರ್ಯರು (ಪಂ.ಪೂ.ವಿದ್ಯಾಸಿಂಹಾ-ಚಾರ್ಯರು) . ಪ್ರತಿಕ್ಷಣವೂ ವಿದ್ಯಾರ್ಥಿಗಳ ಸರ್ವತೋ ಮುಖವಾದ ಅಭಿವೃದ್ಧಿಗೆ ಹಂಬಲಿಸುವ ಮಹಾಚೇತನ. ಪ್ರತಿಯೊಬ್ಬ ವಿದ್ಯಾರ್ಥಿಯು ಮಹಾಪಂಡಿತನಾಗಬೇಕು ಎಂದು ಎಷ್ಟು ಕಳಕಳಿಯೋ ಅಷ್ಟೇ ಕಳಕಳಿ ಅವನು ಪ್ರಾಮಾಣಿಕ ವಿಷ್ಣುಭಕ್ತನಾಗಬೇಕು ಉತ್ತಮ ಸಾಧಕನಾಗಬೇಕು ಎನ್ನುವದು. ಇದೇ ಇವರ ಮಹೋದ್ದೇಶ. ಇದಕ್ಕಾಗಿಯೇ ಇವರ ಬದುಕು. ಇವರ ಉಸಿರು. ಈ ಕೆಲಸಕ್ಕೆ ಬೇಕಾದ ಸಕಲ ಸಾಮಗ್ರಿ ಅವರದು. ನಮ್ಮ ಜ್ಞಾನ, ಬುದ್ಧಿ, ವಿಚಾರ, ವಿಮರ್ಶಾಶಕ್ತಿ ಅತ್ಯಲ್ಪವಾಗಿದ್ದರೂ ಎಲ್ಲವೂ ಆ ಗುರುಗಳದೇ. ಗ್ರಂಥ ಶುದ್ಧಿ ಆ ಗುರುಗಳ ಅನುಗ್ರಹದಿಂದ ಅನೇಕ ಪುರಾಣ ಹಾಗು ಪಂಚರಾತ್ರಗಳನ್ನು ಯಥಾಮತಿಯಾಗಿ ಅವಲೋಕಿಸಿ ಶ್ರೀಮದಾಚಾರ್ಯರು ಹೇಳಿದ ಅನೇಕ ಪ್ರಮೇಯಗಳಿಗೆ ಸಂವಾದಿಯಾದ ಪ್ರಮಾಣಗಳನ್ನು ಅಡಿಟಿಪ್ಪಣಿಯಲ್ಲಿ ಕೊಡಲು ಪ್ರಯತ್ನಿಸಿರುವೆವು. ಅದನ್ನು ಹುಡುಕುವ ಬಗೆ ಹೊಂದಿಸುವ ರೀತಿ ಸಂಶಯ ಬಂದಲ್ಲಿ ಪರಿಹಾರ, ಎಲ್ಲವೂ ಅವರ ಮಾರ್ಗದರ್ಶನದಲ್ಲಿ ಆದ ಕಾರ್ಯಗಳು. ಅಂತಹ ಗುರುಗಳ ಪಾದಗಳಲ್ಲಿ ಭಕ್ತಿಶ್ರದ್ಧಾಪೂರ್ವಕವಾದ ಅನಂತ ಸಾಷ್ಟಾಂಗ ನಮಸ್ಕಾರಗಳು.

ಅತ್ಯಮೂಲ್ಯವಾದ ಮೋಕ್ಷಸಾಧನವಾದ ಈ ಮಾಧ್ವದೇಹವನ್ನಿತ್ತು ಮಹೋಪಕಾರಮಾಡಿದ , ದೈಹಿಕ ಮಾನಸಿಕವಾದ ಎಲ್ಲ ಕಷ್ಟಗಳನ್ನು ಸಹಿಸಿ ಈ ಗ್ರಂಥವು ಯಶಸ್ವಿಯಾಗಿ ಪ್ರಕಾಶನವಾಗುವದಕ್ಕೆ ಕಾರಣರಾದ ನಮ್ಮ ಮಾತಾಪಿತೃಗಳಿಗೆ ಸಾಷ್ಟಾಂಗ ನಮಸ್ಕಾರಗಳು.

ನವವ್ಯಾಖ್ಯಾನವೆಂಬ ಹೆಸಿರನ ವ್ಯಾಖ್ಯಾನದ ಹಸ್ತಪ್ರತಿಯನ್ನು ಕೊಟ್ಟ ಸತ್ಯಧ್ಯಾನ ವಿದ್ಯಾಪೀಠದ ಹಿರಿಯ ಪಂಡಿತರಾದ ಪಂ. ಜಯತೀರ್ಥಾಚಾರ್ಯ ಮಳಗಿಯವರಿಗೆ,

ಈ ಕಾರ್ಯಕ್ಕೆ ಹಸ್ತಪ್ರತಿಗಳನ್ನು ಒದಗಿಸಿ ಅನೇಕ ರೀತಿಯಿಂದ ಸಹಕಾರ ಮಾಡಿರುವ, ಪೂರ್ಣಪ್ರಜ್ಞ ಸಂಶೋಧನ ಮಂದಿರದ ನಿರ್ದೇಶಕರಾದ ಪಂ. ಆನಂದತೀರ್ಥಾಚಾರ್ಯ ನಾಗಸಂಪಿಗೆಯವರಿಗೆ,

ಶುದ್ಧಪ್ರತಿ ಉಪಲಬ್ಧವಾಗದಿರುವದರಿಂದ ಕೆಲವು ಕಡೆ ವಾಕ್ಯಗಳು ಅಸ್ಪಷ್ಟವಾಗಿ, ಇನ್ನು ಅನೇಕ ಕಡೆ ತ್ರುಟಿತವಾಗಿವೆ. ಆದಷ್ಟು ಶುದ್ಧಪಾಠವನ್ನು ಕೊಡಲು ಪ್ರಯತ್ನಿಸಿದ್ದೇವೆ. ತಪ್ಪಿದ್ದಲ್ಲಿ ಅಧ್ಯೇತೃಗಳು ಕ್ಷಮಿಸಬೇಕೆಂದು ಕೋರುತ್ತೇವೆ.

2. ವಾದಿರಾಜೀಯಾ—ಶ್ರೀವಾದಿರಾಜತೀರ್ಥರ ಭಾವಪ್ರಕಾಶಿಕಾ ಇದು ಈಗಾಗಲೇ ಎರಡು ಬಾರಿ ಮುದ್ರಣವಾಗಿದೆ. ಇದರಲ್ಲಿ ಮೊದಲನೆಯದು ಪಂ.ಶ್ರೀನಾರಾಯಣತಂತ್ರಿಗಳಿಂದ ಸಂಪಾದಿತವಾಗಿ ಶೀರೂರು ಮಠದಿಂದ ಪ್ರಕಾಶನಗೊಂಡಿದೆ. ಮತ್ತೊಂದು ಈಚೆಗೆ ಡಾ.ಶ್ರೀವ್ಯಾಸನಕೆರೆ ಪ್ರಭಂಜನಾಚಾರ್ಯರು ಪ್ರಕಾಶಿಸಿದ್ದಾರೆ. ಇದರಲ್ಲಿ ಮೊದಲನೆಯ ಪುಸ್ತಕವನ್ನು ಆಧರಿಸಿ ಮುದ್ರಿಸಿದ್ದೇವೆ. ಇದರಲ್ಲೂ ಇದ್ದ ಮುದ್ರಣದೋಷಗಳನ್ನು ಸರಿಪಡಿಸಿ ಆದಷ್ಟು ಶುದ್ಧಮಾಡಲು ಪ್ರಯತ್ನಿಸಿದ್ದೇವೆ.

3. ಸತ್ಯಾಭಿನವರ ಟಿಪ್ಪಣೀ—ಶ್ರೀಸತ್ಯಾಭಿನವರ ಕೃತಿ ದುರ್ಘಟಾರ್ಥಪ್ರಕಾಶಿಕಾ. ಇದು ಹಿಂದೆ, ಪಂ.ಗಲಗಲಿ ರಾಮಾಚಾರ್ಯರಿಂದ ಸಂಶೋಧಿತವಾಗಿ ಸತ್ಯಧ್ಯಾನ ವಿದ್ಯಾಪೀಠದಿಂದ 1968ರಲ್ಲಿ ಪ್ರಕಾಶಿತವಾಗಿದೆ . ಇದನ್ನೇ ಆಧಾರವಾಗಿಟ್ಟುಕೊಂಡು ಈ ವ್ಯಾಖ್ಯಾನವನ್ನು ಮುದ್ರಿಸಲಾಗಿದೆ.

4. ಸಂಕರ್ಷಣತೀರ್ಥೀಯಾ—ಶ್ರೀಸಂಕರ್ಷಣತೀರ್ಥರು ಬರೆದ ಟಿಪ್ಪಣೀ ಶುಭಪ್ರಕಾಶಿಕಾ. ಇದರ ಮೂಲಕೋಶಗಳು ಶ್ರೀಸತ್ಯಾತ್ಮತೀರ್ಥರು ಕೊಟ್ಟದ್ದು. ಒಟ್ಟು ಎರಡು ಪ್ರತಿಗಳು.ಒಂದು ಪ್ರಾಚೀನ ಹಸ್ತಪ್ರತಿಯನ್ನು ನೋಡಿ ಇತ್ತೀಚಿನವರು ಪ್ರತಿಮಾಡಿದ್ದು. ಇದು ಎರಡನೇ ಅಧ್ಯಾಯದ ಐವತ್ತು ಶ್ಲೋಕದ ವರೆಗೆ ಇದೆ. ಅತ್ಯಂತ ಶುದ್ಧವಾದ ಪ್ರತಿ . ಇನ್ನೊಂದು ಪ್ರತಿ ಮೂರು ಅಧ್ಯಾಯಗಳವರೆಗೆ ಮಾತ್ರ ಉಪಲಬ್ಧವಾಗಿದೆ.ಇದೂ ಶುದ್ಧವಾಗಿದೆ. ಒಂದೆರಡು ಕಡೆಮಾತ್ರ ತ್ರುಟಿತವಾಗಿದೆ.

5. ವರದರಾಜೀಯಾ—ವರದರಾಜಾಚಾರ್ಯರು ಬರೆದ ಟಿಪ್ಪಣೀ. ಇದರ ಪ್ರತಿ ಒಟ್ಟು ನಾಲ್ಕು. ಶ್ರೀಸತ್ಯಾತ್ಮತೀರ್ಥರು ಕೊಟ್ಟ ಪ್ರತಿ ಎರಡು. ಸತ್ಯಧ್ಯಾನ ವಿದ್ಯಾಪೀಠದ ಎರಡು ಪ್ರತಿ. ಎಲ್ಲಾ ಪ್ರತಿಗಳೂ ಪ್ರಾಯ: ಶುದ್ಧವಾಗಿವೆ.

6. ಜನಾರ್ದನರ ಟಿಪ್ಪಣಿ—ಇವರ ಟಿಪ್ಪಣೀ ಪದಾರ್ಥಪ್ರಕಾಶಿಕಾ. ಇದನ್ನು ಹಿಂದೆ ಪಂ.ಟಿ. ಆರ್. ಕೃಷ್ಣಾಚಾರ್ಯರು ಸಂಪಾದಿಸಿ, ನಿರ್ಣಯ ಸಾಗರ ಮುದ್ರಣಾಲಯದಲ್ಲಿ ಪ್ರಕಾಶಿಸಿದ್ದಾರೆ.ಅದನ್ನೇ ಇಲ್ಲಿ ಆಧರಿಸಿದ್ದೇವೆ.

7. ತಾಮ್ರಪರ್ಣೀ ಟಿಪ್ಪಣೀ—ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು ಬರೆದ ಟಿಪ್ಪಣೀ ಪ್ರಮೇಯಮಣಿಮಾಲಾ. ಇದರ ಉಪಲಬ್ಧವಾದ ಪ್ರತಿಗಳು ಎರಡು. ಒಂದು ಬೆಂಗಳೂರಿನ ಉತ್ತರಾದಿಮಠದ ಗ್ರಂಥಾಲಯದಲ್ಲಿ ಇದ್ದದ್ದು.ಇನ್ನೊಂದು ಹೊಸಪೇಟೆಯ ಉತ್ತರಾದಿಮಠದ ಗ್ರಂಥಾಲಯದಲ್ಲಿ ಇದ್ದದ್ದು.ಎರಡೂ ಶುದ್ಧವಾಗಿವೆ. ಬೆಂಗಳೂರಿನ ಹಸ್ತಪ್ರತಿ ವಿಸ್ತಾರವಾಗಿದೆ. ಇದನ್ನೇ ಪ್ರಧಾನವಾಗಿ ಮುದ್ರಣಕ್ಕೆ ಆಧರಿಸಲಾಗಿದೆ. ಹೊಸಪೇಟೆಯ ಪ್ರತಿಯಲ್ಲಿ ಕೆಲವೆಡೆ ಹೆಚ್ಚಿನ ವಾಕ್ಯಗಳು ಇವೆ. ಅದನ್ನು 'ಇತಿ ಹೋ. ಪುಸ್ತಕೇ ಅಧಿಕ: ಪಾಠ: ದೃಶ್ಯತೇ' ಎಂದು ಅಡಿಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

8. ಜಂಬುಖಂಡಿ ಟಿಪ್ಪಣೀ—ಇದರ ಪ್ರತಿ ಶ್ರೀಸತ್ಯಾತ್ಮತೀರ್ಥರು ಅನುಗ್ರಹಿಸಿದ್ದು. ಶುದ್ಧವಾಗಿದೆ. ಇದರಲ್ಲಿ ವಾದಿರಾಜೀಯ, ವರದರಾಜೀಯ, ಜನಾರ್ದನಭಟ್ಟೀಯ, ತಾಮ್ರಪರ್ಣೀ ಟಿಪ್ಪಣೀ ವಾಕ್ಯಗಳನ್ನು ಯಥಾವತ್ತಾಗಿ ಉದಾಹರಿಸಿರುತ್ತಾರೆ. ಅವುಗಳಲ್ಲಿ ಕೆಲವು ವಾಕ್ಯಗಳು ಮೇಲೆ ಹೇಳಿರುವ ಟಿಪ್ಪಣಿಗಳ ಉಪಲಬ್ಧವಾದಪ್ರತಿಗಳಲ್ಲಿ ಈಗ ಸಿಗುವದಿಲ್ಲ. ಆದರೆ ಅವುಗಳನ್ನು ಆ ಆ ಟಿಪ್ಪಣಿಗಳಲ್ಲಿ ನಾವು ಸೇರಿಸಿಲ್ಲ. ನಮಗೆ ಉಪಲಬ್ಧವಾದಂತೆ ಮುದ್ರಿಸಿದ್ದೇವೆ.

9. ಭಾರತ ಶ್ರೀನಿವಾಸಾಚಾರ್ಯರ ಟಿಪ್ಪಣೀ—ಇದರ ಪ್ರತಿಗಳು ಎರಡು .ಒಂದು ಶ್ರೀ ಸತ್ಯಾತ್ಮತೀರ್ಥರು ಅನುಗ್ರಹಿಸಿದ್ದು. ಇದು ಎರಡು ಅಧ್ಯಾಯಗಳವರೆಗೆ ಮಾತ್ರ ಉಪಲಬ್ಧವಿದೆ. ಇನ್ನೊಂದು ಮೈಸೂರಿನ ಪ್ರಾಚ್ಯ ವಿದ್ಯಾಸಂಶೋಧನಾಲಯದ ಪ್ರತಿ. ಇದು ಪೂರ್ಣವಾಗಿ ಉಪಲಬ್ಧವಾಗಿದ್ದು ನಂದಿನಾಗರಿ ಲಿಪಿಯಲ್ಲಿದೆ. ಎರಡೂ ಶುದ್ಧವಾದ ಪ್ರತಿಗಳೇ.

10. ರಾಮಾಚಾರ್ಯಟಿಪ್ಪಣೀ—ಇದರ ಪ್ರತಿ ಒಂದು. ಶ್ರೀಸತ್ಯಾತ್ಮತೀರ್ಥರು ಅನುಗ್ರಹಿಸಿದ್ದು.ಮೂರು ಅಧ್ಯಾಯಗಳವರೆಗೆ ಮಾತ್ರ ಉಪಲಬ್ಧವಾಗಿದೆ.ಅತ್ಯಂತ ಶುದ್ಧವಾಗಿದೆ.

## ನಮ ಉಕ್ತಿಂ ವಿಧೇಮ

ಶ್ರೀ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು ಈ ಶತಮಾನ ಕಂಡ ದಿವ್ಯ ತಪಸ್ವಿಗಳು ಮತ್ತು ಮಹಾಜ್ಞಾನಿಗಳು. ರಾಮದೇವರ ಪೂಜೆ ಹಾಗು ಶ್ರೀಮನ್ನ್ಯಾಯಸುಧಾದಿಗ್ರಂಥಗಳ ಪಾಠ ಪ್ರವಚನಗಳೇ ಅವರ ಜೀವನದ ಉಸಿರಾಗಿತ್ತು. ಇಡಿಯಾದ ಮಾಧ್ವಸಮಾಜವನ್ನೇ ತಮ್ಮ ಕರುಣೆಯ ಕಡಲಲ್ಲಿ ಮುಳುಗಿಸಿ ಪೋಷಿಸಿದವರು. ಈ ಮಹಾನುಭಾವರ ಪ್ರಯತ್ನ ಹಾಗು

